KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೦೯ (ಚೈತ್ರ ೫, ಶಕ ವರ್ಷ ೧೯೩೦) | ಸಂಚಿಕೆ ೧೩ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ. ಟಿಆರ್‌ಡಿ 121 ಆರ್‌ಐಸಿ 2008, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕರಣ 4(1) (ಬಿ) (2005ರ ಕೇಂದ್ರ ಅಧಿನಿಯಮ ಸಂಖ್ಯೆ 22) ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸಾರಿಗೆ ಇಲಾಖೆಗೆ (ಸಚಿವಾಲಯ) ಸಂಬಂಧಿಸಿದ ಸವಿವರವಾದ ಮಾಹಿತಿಯನ್ನು, ಅಧಿಸೂಚನೆ ಸಂ. ಟಿಆರ್‌ಡಿ 197 ಆರ್‌ಐಸಿ 2005 ದಿನಾಂಕ: 22.12.2005ರಲ್ಲಿರುವಂತೆ ಹಾಗೂ ಅಧಿಸೂಚನೆ ಸಂ. ಟಿಆರ್‌ಡಿ 20 ಆರ್‌ಐಸಿ 2007 ದಿನಾಂಕ: 31.12.2007ರಲ್ಲಿರುವಂತೆ ದಿನಾಂಕ: 5.1.2006ರ ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿತ್ತು. ಈಗ, ದಿನಾಂಕ: 22.12.2005 ಮತ್ತು 31.12.2007ರ ಸದರಿ ಅಧಿಸೂಚನೆಗಳನ್ನು ರದ್ದುಪಡಿಸಿ, ಅವುಗಳ ಇಂದಿನವರೆಗೆ ಕ್ರಮಗೊಳಿಸಿದ ಮಾಹಿತಿಯನ್ನು ಜನಸಾಮಾನ್ಯರ ಮಾಹಿತಿಗಾಗಿ ಈ ಕೆಳಗೆ ಪ್ರಕಟಿಸಲಾಗಿದೆ.

ಸಾರಿಗೆಯು, ಕರ್ನಾಟಕ ಸರ್ಕಾರಿ ಸಚಿವಾಲಯದ ಒಂದು ವಿಭಾಗವಾಗಿದೆ. ಸಾರಿಗೆ ಸಚಿವಾಲಯವು ಕರ್ನಾಟಕದಲ್ಲಿ ಸಾರಿಗೆ ವಲಯಕ್ಕೆ ಸಂಬಂಧಿಸಿದಂತೆ ಸರ್ಕಾರವಾಗಿದೆ. ಸಾರಿಗೆಗೆ ಸಂಬಂಧಪಟ್ಟಂತೆ ತೀರ್ಮಾನ ಕೈಗೊಳ್ಳುವುದಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಚಟುವಟಿಕೆಗಳನ್ನು ಸಾರಿಗೆ ಸಚಿವಾಲಯದಲ್ಲಿ ಆಚರಣೆಗೆ ತರಲಾಗುತ್ತಿದೆ.

ಸಾರಿಗೆ ಇಲಾಖೆ ಸಚಿವಾಲಯದ ವ್ಯವಹಾರಗಳನ್ನು ಈ ಮುಂದಿನ ಶಾಖೆಗಳ ಮೂಲಕ ಎಂದರೆ,

1. ರಾಜ್ಯ ಸಾರಿಗೆ ಉದ್ಯಮಗಳ ಶಾಖೆ.
2. ಮೋಟಾರು ವಾಹನಗಳ ಶಾಖೆ
3. ಆಂತರಿಕ ಹಣಕಾಸು ಸಲಹೆಗಾರರು
4. ಕಾನೂನು ಕೋಶ – ಇವುಗಳ ಮೂಲಕ ನಡೆಸಲಾಗುತ್ತದೆ.

**(i) ಸಾರಿಗೆ ಇಲಾಖೆಯ (ಸಚಿವಾಲಯದ) ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಇದು ತನ್ನ ಅಧೀನದಲ್ಲಿ, ಸಾರಿಗೆ ಇಲಾಖೆ, ಆಯುಕ್ತರ ಕಚೇರಿ ಮತ್ತು ನಾಲ್ಕು ರಾಜ್ಯ ಸಾರಿಗೆ ಉದ್ದಿಮೆಗಳಾದ ಕ.ರಾ.ರ.ಸಾ.ಸಂ., ಬೆಂ.ನ.ಸಾ.ಸಂ. ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು

ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ ಸಂಸ್ಥೆ (ಡಿಡಿಯುಟಿಟಿಎಲ್) ಎಂದು ಕರೆಯಲಾಗುವ ಒಂದು ಟ್ರಕ್ಕು ಟರ್ಮಿನಲ್ ಅನ್ನು ಹೊಂದಿದೆ.

ಸಾರಿಗೆ ಸಚಿವಾಲಯವು ಸಾರಿಗೆ ವಿಷಯ ಮಾರ್ಗಸೂಚಿಗಳಿಗೆ ಸಂಬಂಧಿಸಿದ ಸೂಚನೆ ಮುಂತಾದವುಗಳನ್ನು ಹೊರಡಿಸುತ್ತದೆ.

ಸಾರ್ವಜನಿಕ ಉದ್ದೇಶವನ್ನು ಹೊಂದಿರುವ ಸರ್ಕಾರಿ ನೀತಿಗಳು, ಧ್ಯೇಯೋದ್ದೇಶಗಳನ್ನು ಸಾರಿಗೆ ಸಚಿವಾಲಯದ ಮೂಲಕ ನಿರ್ವಹಿಸಲಾಗುತ್ತದೆ ಮತ್ತು ಅವುಗಳನ್ನು ಸಾರಿಗೆ ಇಲಾಖೆಯ ಮೂಲಕ ಹಾಗೂ ಐದು ರಾಜ್ಯ ಸಾರಿಗೆ ಉದ್ದಿಮೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತದೆ.

ಸಾರಿಗೆ ಇಲಾಖೆಯು ಅನುಷ್ಠಾನಗೊಳಿಸಬೇಕಾದ ಹೊಸ ಯೋಜನಾ ಕಾರ್ಯಕ್ರಮಗಳಿಗೆ ಸಾರಿಗೆ ಇಲಾಖೆಯಲ್ಲಿ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದು ಅನುಷ್ಠಾನ ಗೊಳಿಸಲಾಗುವುದು.

ಸಾರಿಗೆ ಸಚಿವಾಲಯದಲ್ಲಿನ ಪ್ರಕಾರ್ಯಗಳನ್ನು ಈ ಮುಂದಿನ ಅಧಿನಿಯಮಗಳು ಮತ್ತು ನಿಯಮಗಳಿಗೆ ಅನುಸಾರವಾಗಿ ಆಚರಣೆಗೆ ತರಲಾಗುತ್ತಿದೆ:–

i) ಕೇಂದ್ರ ಮೋಟಾರು ವಾಹನ ಅಧಿನಿಯಮ, 1988 ಮತ್ತು ನಿಯಮಗಳು
ii) ಕರ್ನಾಟಕ ಮೋಟಾರು ವಾಹನ ನಿಯಮಗಳು, 1989.
iii) ಕೇಂದ್ರ ಮೋಟಾರು ವಾಹನ ತೆರಿಗೆ ನಿರ್ಧರಣೆ, ಅಧಿನಿಯಮ, 1957
iv) ಕೇಂದ್ರ ಮೋಟಾರು ವಾಹನ ತೆರಿಗೆ ನಿರ್ಧರಣೆ, ನಿಯಮಗಳು, 1957
v) ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950.
vi) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961

ಸಾರಿಗೆ ಸಚಿವಾಲಯದ ಮೂಲಕ ಸರ್ಕಾರವು, ಮೇಲ್ಕಂಡ ಅಧಿನಿಯಮಗಳು ಮತ್ತು ನಿಯಮಗಳಲ್ಲಿರುವ ಚಲಾಯಿಸಬಹುದಾದ ಅಧಿಕಾರಗಳ ಪ್ರಕಾರ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

ಸಾರಿಗೆ ಆಯುಕ್ತರ ನಿಯೋಜಿತ ಅಧಿಕಾರಗಳನ್ನು ಚಲಾಯಿಸಲಿಕ್ಕಾಗದಿರುವಂತಹ ಮತ್ತು ಸಾರಿಗೆ ಆಯುಕ್ತರ ನಿಯೋಜಿತ ಅಧಿಕಾರಗಳನ್ನು ಮೀರಿರುವಂತಹ ನೌಕರರ ಮತ್ತು ಅಧಿಕಾರಗಳ ಸೇವಾ ವಿಷಯಗಳಿಗೆ ಸಂಬಂಧಿಸಿದ ಕಾರ್ಯವನ್ನು ಸಾರಿಗೆ ಸಚಿವಾಲಯದಲ್ಲಿ ನಿರ್ವಹಿಸಲಾಗುತ್ತದೆ.

ರಾಜ್ಯ ಸಾರಿಗೆ ಉದ್ದಿಮೆಗಳ ಪ್ರಕಾರ್ಯಗಳನ್ನು ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950 ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961ರ ಅಡಿಯಲ್ಲಿ ನಿರ್ವಹಿಸಲಾಗುತ್ತದೆ ಹಾಗೂ ಹಣಕಾಸಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಮತ್ತು ಸರ್ಕಾರವು ನಿರ್ವಹಿಸಬೇಕಾದ ಎಲ್ಲಾ ಪ್ರಕಾರ್ಯಗಳನ್ನು ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950ರ ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961ರ ಅನುಸಾರ ಸಾರಿಗೆ ಸಚಿವಾಲಯದಲ್ಲಿ ನಿರ್ವಹಿಸಲಾಗುತ್ತಿದೆ.

ಸಾರಿಗೆ ಸಚಿವಾಲಯದ ಆಡಳಿತ ಮುಖ್ಯಸ್ಥರು ಪ್ರಧಾನ ಕಾರ್ಯದರ್ಶಿಯವರಾಗಿದ್ದು, ಇವರಿಗೆ ಶ್ರೇಣಿ–Iರ (ಹಿರಿಯ ಶ್ರೇಣಿ) ದರ್ಜೆಯ ಮೂವರು ಅಧಿಕಾರಿಗಳು ಆಡಳಿತದಲ್ಲಿ ನೆರವು ನೀಡುತ್ತಾರೆ. ಆ ಅಧಿಕಾರಿಗಳೆಂದರೆ;

1. ಉಪಕಾರ್ಯದರ್ಶಿ: ಇವರು ಸಾರಿಗೆ ಇಲಾಖೆಯ ಸೇವಾ ವಿಷಯಗಳಿಗೆ ಮತ್ತು ಟೆಂಡರ್ ಬುಲೆಟಿನ್ನುಗಳಿಗೆ ಹಾಗೂ ಇತರ ಎಲ್ಲಾ ತತ್ಸಂಬಂಧಿತ ವಿಷಯಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ನೆರವು ನೀಡುತ್ತಾರೆ.
2. ಉಪಕಾರ್ಯದರ್ಶಿ ಹಾಗೂ ಆಂತರಿಕ ಹಣಕಾಸು ಸಲಹೆಗಾರರು (ಐಎಫ್ಎ): ಇವರು ಹಣಕಾಸು ವಿಷಯಗಳಲ್ಲಿ ನೆರವು ನೀಡುತ್ತಾರೆ.
3. ಉಪಕಾರ್ಯದರ್ಶಿ ಹಾಗೂ ಕಾನೂನು ಕೋಶದ ಮುಖ್ಯಸ್ಥರು: ಇವರುಗಳು ಕಾನೂನು ವಿಷಯಗಳಲ್ಲಿ ನೆರವು ನೀಡುತ್ತಾರೆ.

ಉಪ ಕಾರ್ಯದರ್ಶಿಯವರು, ತಮ್ಮ ಅಧೀನದಲ್ಲಿ ಕ.ರಾ.ರ.ಸಾ.ಸಂ., ಈ.ಕ.ರ.ಸಾ.ಸಂ., ವಾ.ಕ.ರ.ಸಾ.ಸಂ. ಮತ್ತು ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ ಸಂಸ್ಥೆ (ಡಿಡಿಯುಟಿಟಿಎಲ್) ಇವುಗಳ ವಿಷಯಗಳನ್ನು ನಿರ್ವಹಿಸುವ ಒಬ್ಬ ಅಧೀನ ಕಾರ್ಯದರ್ಶಿ (ಶ್ರೇಣಿ–Iಕಿರಿಯ ಶ್ರೇಣಿ) ಹಾಗೂ ಸಾರಿಗೆ ಇಲಾಖೆಯ ವಿಷಯಗಳನ್ನು ನಿರ್ವಹಿಸುವ ಒಬ್ಬ ಪೀಠಾಧಿಕಾರಿ (ಡೆಸ್ಕ್ ಆಫೀಸರ್) (ಶ್ರೇಣಿ–II) ಅವರನ್ನು ಹೊಂದಿದ್ದಾರೆ.

ಉಪ ಕಾರ್ಯದರ್ಶಿ ಹಾಗೂ ಆಂತರಿಕ ಹಣಕಾಸು ಸಲಹೆಗಾರರಿಗೆ, (i) ಹಣಕಾಸು ವಿಷಯವಾಗಿ ಅಭಿಪ್ರಾಯವನ್ನು ನೀಡುವಲ್ಲಿ; ಮತ್ತು (ii) ಆಯವ್ಯಯ ಮತ್ತು ಲೆಕ್ಕಪರಿಶೋಧನೆ ವಿಷಯಗಳಲ್ಲಿ ಇಬ್ಬರು ಶಾಖಾಧಿಕಾರಿಗಳು ನೆರವು ನೀಡುವರು.

ಕಾನೂನು ಕೋಶದ ಮುಖ್ಯಸ್ಥರು ಹಾಗೂ ಸರ್ಕಾರದ ಪದನಿಮಿತ್ತ ಉಪ ಕಾರ್ಯದರ್ಶಿಯವರಿಗೆ ಒಬ್ಬರು ಅಧೀನ ಕಾರ್ಯದರ್ಶಿಯವರು ನೆರವು ನೀಡುತ್ತಾರೆ.

ಸಾರಿಗೆ ಸಚಿವಾಲಯದ ಸಂಘಟನಾ ನಕ್ಷೆ



**(ii) ಸಾರಿಗೆ ಸಚಿವಾಲಯದ ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು:**

ಎ) **ಸರ್ಕಾರದ ಪ್ರಧಾನ ಕಾರ್ಯದರ್ಶಿ:** ಇವರು ಸಾರಿಗೆ ಸಚಿವಾಲಯ (ಸರ್ಕಾರ)ದ ಆಡಳಿತಾತ್ಮಕ ಮುಖ್ಯಸ್ಥರಾಗಿರುತ್ತಾರೆ. ಇವರು ಕರ್ನಾಟಕದಲ್ಲಿನ ಸಾರಿಗೆ ವಲಯದ ಎಲ್ಲಾ ವಿಷಯಗಳ ಸಂಬಂಧದಲ್ಲಿ, ವಿಶೇಷವಾಗಿ, ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ), ಕ.ರಾ.ರ.ಸಾ.ಸಂ., ಬೆಂ.ನ.ಸಾ.ಸಂ., ಈ.ಕ.ರ.ಸಾ.ಸಂ., ವಾ.ಕ.ರ.ಸಾ.ಸಂ, ಮತ್ತು ಡಿ.ದೇ.ಅ.ಟ್ರ.ಟ.ಸಂ. ವಿಷಯಗಳ ಸಂಬಂಧದಲ್ಲಿ ಪ್ರಭಾರ ಹೊಂದಿರುತ್ತಾರೆ. ಇವರು ಮಾನ್ಯ ಸಾರಿಗೆ ಸಚಿವರ ಅಥವಾ ಸರ್ಕಾರದ ನಿರ್ದೇಶನಗಳಿಗನುಗುಣವಾಗಿ ಮತ್ತು ಆದೇಶಗಳ ಮೇರೆಗೆ ಅಥವಾ ಸಂದರ್ಭಾನುಸಾರ ಸಾಮಾನ್ಯ ಕ್ರಮದಲ್ಲಿ ಕಾರ್ಯನಿರ್ವಹಿಸುತ್ತಾರೆ. ಇವರು ತಮ್ಮ ಅಡಿಯಲ್ಲಿ ಬರುವ ಸಾರಿಗೆ ಇಲಾಖೆ ಮತ್ತು ನಾಲ್ಕು ರಾಜ್ಯ ಸಾರಿಗೆ ಉದ್ಯಮಗಳು ಮತ್ತು ಡಿ.ದೇ.ಅ.ಟ್ರ.ಟ.ಸಂ. ಇವುಗಳಲ್ಲಿ ನಿರ್ವಹಿಸಲಾಗುತ್ತಿರುವ ಕೆಲಸದ ಸಮಗ್ರ ಪ್ರಭಾರವನ್ನು ಹೊಂದಿರುತ್ತಾರೆ. ಇವರು ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಮತ್ತು ಪ್ರಕರಣಗಳನ್ನು ವಿಲೆ ಮಾಡುವಲ್ಲಿ ಸಂದರ್ಭಾನುಸಾರ, ಮಾನ್ಯ ಸಾರಿಗೆ ಸಚಿವರು ಅಥವಾ ಸರ್ಕಾರಕ್ಕೆ ನೆರವು ನೀಡುತ್ತಾರೆ ಮತ್ತು ಸಲಹೆ ಕೊಡುತ್ತಾರೆ.

ಬಿ) **ಸರ್ಕಾರದ ಉಪ ಕಾರ್ಯದರ್ಶಿ:** ಇವರು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ)ಗೆ ಸಂಬಂಧಪಟ್ಟ ವಿಷಯಗಳ ಕುರಿತಾಗಿ ಕಾರ್ಯ ನಿರ್ವಹಿಸುವಲ್ಲಿ ಪ್ರಧಾನ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಸಾರಿಗೆ ಸಚಿವಾಲಯದ ಸಮಗ್ರ ಉಸ್ತುವಾರಿ ನೋಡಿಕೊಳ್ಳುತ್ತಾರೆ.

ಸಿ) **ಉಪ ಕಾರ್ಯದರ್ಶಿ ಮತ್ತು ಆಂತರಿಕ ಹಣಕಾಸು ಸಲಹೆಗಾರ:** ಇವರು ಹಣಕಾಸು ಸಂಬಂಧಿತ ವಿಷಯಗಳಲ್ಲಿ ಪ್ರಧಾನ ಕಾರ್ಯದರ್ಶಿಗೆ ಸಲಹೆ ನೀಡುತ್ತಾರೆ. ಇವರು ಸಾರಿಗೆ ಇಲಾಖೆಯ ಬಜೆಟ್ ಸಿದ್ಧಪಡಿಸುತ್ತಾರೆ. ಸಾರಿಗೆ ಇಲಾಖೆ ಮತ್ತು ಸಾರಿಗೆ ಇಲಾಖೆಯ ಅಧೀನದಲ್ಲಿ ಬರುವ 5 ಸಂಸ್ಥೆಗಳ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರಗಳ ವಿಷಯಗಳಲ್ಲಿ ಇವರು ಹೊಣೆಗಾರರಾಗಿರುತ್ತಾರೆ.

ಡಿ) **ಉಪ ಕಾರ್ಯದರ್ಶಿ ಮತ್ತು ಕಾನೂನು ಕೋಶದ ಮುಖ್ಯಸ್ಥ:** ಇವರು ಕಾನೂನು ಸಂಬಂಧಿತ ವಿಷಯಗಳಲ್ಲಿ ಪ್ರಧಾನ ಕಾರ್ಯದರ್ಶಿಗೆ ಸಲಹೆ ನೀಡುತ್ತಾರೆ.

ಇ) **ಸರ್ಕಾರದ ಅಧೀನ ಕಾರ್ಯದರ್ಶಿ:** ಇವರು ಕ.ರಾ.ರ.ಸಾ.ಸಂ., ಬೆಂ.ನ.ಸಾ.ಸಂ., ಈ.ಕ.ರ.ಸಾ.ಸಂ., ವಾ.ಕ.ರ.ಸಾ.ಸಂ, ಮತ್ತು ಡಿ.ದೇ.ಅ.ಟ್ರ.ಟ.ಸಂ. ಇವುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಪ್ರಧಾನ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಕಡತಗಳನ್ನು ಸಲ್ಲಿಸುತ್ತಾರೆ. ಇವರು ಸಾಮಾನ್ಯವಾಗಿ ಪ್ರಧಾನ ಕಾರ್ಯದರ್ಶಿಯವರ ಮತ್ತು ಉಪ ಕಾರ್ಯದರ್ಶಿಯವರ ಆದೇಶಗಳನ್ವಯ ಕಾರ್ಯ ನಿರ್ವಹಿಸುತ್ತಾರೆ. ಇವರು ಕಡತಗಳಲ್ಲಿರುವ ಆದೇಶಗಳ ಪ್ರಕಾರ ಪತ್ರಗಳು, ಸುತ್ತೋಲೆಗಳು, ಸರ್ಕಾರಿ ಆದೇಶಗಳು ಮುಂತಾದವುಗಳನ್ನು ಹೊರಡಿಸುತ್ತಾರೆ. ಇವರು ತಮಗೆ ವಹಿಸಿದ ಕಾರ್ಯವನ್ನು ಕಾನೂನಿನ ಅನುಸಾರ ಮತ್ತು ಕಾಲ ಕಳೆಯದಂತೆ ಮತ್ತು ವಿಳಂಬವಾಗದಂತೆ ನಿರ್ವಹಿಸಲು ಜವಾಬ್ದಾರರಾಗಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಇವರು, ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯೂ ಸಹ ಆಗಿರುತ್ತಾರೆ.

ಎಫ್) **ಅಧೀನ ಕಾರ್ಯದರ್ಶಿ (ಕಾನೂನು ಕೋಶ):** ಇವರು ಕಾನೂನು ವಿಷಯಗಳಿಗೆ, ನ್ಯಾಯಾಲಯದ ವಿಷಯಗಳಿಗೆ ಸಂಬಂಧಪಟ್ಟಂತೆ ಸಾರಿಗೆ ಇಲಾಖೆಯ ಕಡತಗಳನ್ನು ಸಿದ್ಧಪಡಿಸಿ ಮಂಡಿಸುವಲ್ಲಿ ಕಾನೂನು ಕೋಶದ ಮುಖ್ಯಸ್ಥರಿಗೆ ನೆರವಾಗುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

ಜಿ) **ಶಾಖಾಧಿಕಾರಿಗಳು:**

**i) ಪೀಠಾಧಿಕಾರಿ (ಮೋಟಾರು ವಾಹನಗಳ ಶಾಖೆ):** ಇವರು ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ಗೊತ್ತುಪಡಿಸಿದ ಕಾರ್ಯವಿಧಾನದ ಪ್ರಕಾರ ವಿಷಯ ನಿರ್ವಾಹಕರು ಸಲ್ಲಿಸಿದ ಕಡತಗಳು / ಪತ್ರಗಳನ್ನು ಪರಿಶೀಲಿಸುತ್ತಾರೆ. ಇವರು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ)ಗೆ ಸಂಬಂಧಪಟ್ಟ ವಿಷಯಗಳಲ್ಲಿ ಮತ್ತು ಇತರ ಸಾರಿಗೆ ವಿಷಯಗಳಲ್ಲಿ ಉಪ ಕಾರ್ಯದರ್ಶಿಗೆ ನೆರವಾಗುತ್ತಾರೆ ಮತ್ತು ಕಡತಗಳನ್ನು ಸಲ್ಲಿಸುತ್ತಾರೆ. ಇವರು ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಕಡತಗಳಲ್ಲಿರುವ ಆದೇಶಗಳ ಪ್ರಕಾರ ಪತ್ರಗಳು, ಸುತ್ತೋಲೆಗಳು, ಸರ್ಕಾರಿ ಆದೇಶಗಳು ಮುಂತಾದವುಗಳನ್ನು ಹೊರಡಿಸುತ್ತಾರೆ. ಇವರು ತಮಗೆ ವಹಿಸಿದ ಕಾರ್ಯವನ್ನು ಕಾನೂನಿನ ಅನುಸಾರ ನಿರ್ವಹಿಸಲು ಜವಾಬ್ದಾರರಾಗಿರುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಲಾದಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಇವರು ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯೂ ಸಹ ಆಗಿರುತ್ತಾರೆ.

**ii) ಶಾಖಾಧಿಕಾರಿ (ರಾಜ್ಯ ಸಾರಿಗೆ ಉದ್ಯಮಗಳ ಶಾಖೆ):** ಇವರು ಸದರಿ ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಕ.ರಾ.ರ.ಸಾ.ಸಂ., ಬೆಂ.ನ.ಸಾ.ಸಂ., ಈ.ಕ.ರ.ಸಾ.ಸಂ., ವಾ.ಕ.ರ.ಸಾ.ಸಂ, ಮತ್ತು ಡಿ.ದೇ.ಅ.ಟ್ರ.ಟ.ಸಂ. ಇವುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸುತ್ತಾರೆ. ಇವರು ವಿಷಯನಿರ್ವಾಹಕರು ಸಲ್ಲಿಸುವ ಕಡತಗಳನ್ನು ಪರಿಶೀಲಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಿರುವಂತಹ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಮಾಹಿತಿ ಹಕ್ಕು ಅಧಿನಿಯಮ, 2005ರ ಪ್ರಕಾರ ಇವರು ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯು ಸಹ ಆಗಿರುತ್ತಾರೆ.

**iii) ಶಾಖಾಧಿಕಾರಿ, ಸ್ವೀಕೃತಿಗಳು, ಪ್ರಕಟಣೆ ಮತ್ತು ಸಮನ್ವಯ:** ಇವರು ಶಾಖೆಯ ಪ್ರಭಾರದಲ್ಲಿರುತ್ತಾರೆ. ಇವರು ಸ್ವೀಕೃತಿಗಳು, ಪ್ರಕಟಣೆಗಳು ಮತ್ತು ಸಮನ್ವಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ನಿರ್ವಹಿಸುತ್ತಾರೆ. ಸಾರಿಗೆ ಸಚಿವಾಲಯಕ್ಕೆ ಸಂಬಂಧಪಟ್ಟ ವಿವಿಧ ಸಭೆಗಳನ್ನು ನಡೆಸುವಲ್ಲಿ ಉಪ ಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿಗೆ ಇವರು ನೆರವು ನೀಡುತ್ತಾರೆ. ಇವರು ಒಂದಕ್ಕಿಂತ ಹೆಚ್ಚಿನ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಸಹ ನಿರ್ವಹಿಸುತ್ತಾರೆ.

**iv) ಶಾಖಾಧಿಕಾರಿ (ಆಂತರಿಕ ಹಣಕಾಸು ಸಲಹೆ, ಅಭಿಪ್ರಾಯ):** ಇವರು ಅಧೀನ ಕಾರ್ಯದರ್ಶಿ ಅಥವಾ ಉಪ–ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿಗಳು ಅಂತರಿಕ ಹಣಕಾಸು ಸಲಹೆಗಾರರಿಗೆ ಕಳುಹಿಸಿದ ಹಣಕಾಸಿನ ವಿಷಯಗಳಿಗೆ ಸಂಬಂಧಪಟ್ಟಂತೆ ಸಾರಿಗೆ ವಿಭಾಗದ ಪ್ರಕರಣಗಳನ್ನು ಪರಿಶೀಲಿಸುವಲ್ಲಿ ಮತ್ತು ಸಿದ್ಧಪಡಿಸಿ ಒಪ್ಪಿಸುವಲ್ಲಿ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಅಸ್ತಿತ್ವದಲ್ಲಿರುವ ನಿಯಮಗಳು/ ಕಾನೂನುಗಳಿಗೆ ಸಂಬಂಧಪಟ್ಟಂತೆ ಮತ್ತು ಹಣಕಾಸು ವಿಷಯಗಳಿಗೆ ಸಂಬಂಧಪಟ್ಟಂತೆ ಪ್ರಕರಣಗಳನ್ನು ಪರಿಶೀಲಿಸಿ, ಕಡತಗಳನ್ನು ಆಂತರಿಕ ಹಣಕಾಸು ಸಲಹೆಗಾರರಿಗೆ ಸಲ್ಲಿಸುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**V) ಶಾಖಾಧಿಕಾರಿ (ಆಂತರಿಕ ಹಣಕಾಸು ಸಲಹೆ, ಬಜೆಟ್):** ಇವರು ಸಾರಿಗೆ ಇಲಾಖೆಯ ಬಜೆಟ್ ಅನ್ನು ಸಿದ್ಧಪಡಿಸುವಲ್ಲಿ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಸಾರಿಗೆ ಸಚಿವಾಲಯದ ಅಡಿಯಲ್ಲಿ ಬರುವ ಎಲ್ಲ ಘಟಕಗಳ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ ವಿಷಯಗಳಿಗೆ ಸಂಬಂಧಪಟ್ಟಂತೆಯೂ ಸಹ ಆಂತರಿಕ ಹಣಕಾಸು ಸಲಹೆಗಾರರಿಗೆ ನೆರವು ನೀಡುತ್ತಾರೆ. ಇವರು ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಮೂದಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಹೆಚ್) ವಿಷಯ ನಿರ್ವಾಹಕರು**: ಅಧೀನ ಕಾರ್ಯದರ್ಶಿಗೆ ನೇರವಾಗಿ ಒಬ್ಬ ಸಹಾಯಕನಿರುತ್ತಾನೆ. ಅಲ್ಲದೆ ಪೀಠಾಧಿಕಾರಿ (ಮೋಟಾರು ವಾಹನಗಳ ಶಾಖೆ) ಇವರಿಗೆ ಒಬ್ಬ ಹಿರಿಯ ಸಹಾಯಕ ಹಾಗೂ ಒಬ್ಬ ಸಹಾಯಕ ಇರುತ್ತಾರೆ. ಶಾಖಾಧಿಕಾರಿ (ರಾಜ್ಯ ಸಾರಿಗೆ ನಿಗಮದ ಶಾಖೆ) ಇವರಿಗೆ ಒಬ್ಬ ಹಿರಿಯ ಸಹಾಯಕ ಹಾಗೂ ಇಬ್ಬರು ಸಹಾಯಕರು ಇರುತ್ತಾರೆ. ಆಂತರಿಕ ಹಣಕಾಸು ಸಲಹೆಗಾರರು, ಅಭಿಪ್ರಾಯ ಇವರಿಗೆ ಇಬ್ಬರು ಹಿರಿಯ ಸಹಾಯಕರು ಹಾಗೂ ಒಬ್ಬ ಸಹಾಯಕ ಇರುತ್ತಾರೆ ಹಾಗೂ ಆಂತರಿಕ ಹಣಕಾಸು ಸಲಹೆಗಾರರು, ಬಜೆಟ್ ಇವರಿಗೆ ಒಬ್ಬ ಹಿರಿಯ ಸಹಾಯಕ ಮತ್ತು ಇಬ್ಬರು ಸಹಾಯಕರು ಇರುತ್ತಾರೆ. ಅವರು ತಮಗೆ ವಹಿಸಿದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಅವರು ಜಾರಿಯಲ್ಲಿರುವ ನಿಯಮಗಳು/ ವಿನಿಯಮನಗಳು/ ಅಧಿನಿಯಮಗಳು ಮತ್ತು ಕಾನೂನು ಇತ್ಯಾದಿಗಳ ಪ್ರಕಾರ ಪ್ರಸ್ತಾವನೆಗಳನ್ನು/ ಸ್ವೀಕೃತಿಗಳನ್ನು ಪರಿಶೀಲಿಸಿ, ಕರ್ನಾಟಕ ಸಚಿವಾಲಯ ಕೈಪಿಡಿಯ ಪ್ರಕಾರ ಕಡತಗಳಲ್ಲಿ ಟಿಪ್ಪಣಿಗಳನ್ನು ಬರೆದು, ಅವುಗಳನ್ನು ಪೀಠಾಧಿಕಾರಿಗೆ ಸಲ್ಲಿಸುತ್ತಾರೆ. ಅವರು ಆದೇಶಗಳ ಪ್ರಕಾರ ಕಡತದಲ್ಲಿ ಕರಡುಗಳನ್ನು ಸಹ ಸಿದ್ಧಪಡಿಸಿ ಒಪ್ಪಿಸುತ್ತಾರೆ.

**ಐ) ಕಿರಿಯ ಸಹಾಯಕ:**ಪ್ರತಿಯೊಂದು ಶಾಖೆಗೂ ಅಂದರೆ ಮೋಟಾರು ವಾಹನ ಶಾಖೆಗೆ ಮತ್ತು ರಾಜ್ಯ ಸಾರಿಗೆ ಉದ್ಯಮಗಳ ಶಾಖೆಗೆ ಒಬ್ಬ ಕಿರಿಯ ಸಹಾಯಕರಿರುತ್ತಾರೆ. ಉಪಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ ಇವರಿಗೂ ಸಹ ಕಿರಿಯ ಸಹಾಯಕರು ಇರುತ್ತಾರೆ. ಅವರು ಪ್ರತಿ ದಿನವು ಶಾಖೆಗೆ ಬರುವ ಟಪಾಲುಗಳನ್ನು ಮತ್ತು ಕಡತಗಳನ್ನು ಸ್ವೀಕರಿಸಿ ಅವುಗಳನ್ನು ವಿಷಯ ನಿರ್ವಾಹಕರಿಗೆ ವಿತರಣೆ ಮಾಡುತ್ತಾರೆ, ಕಡತಗಳ ಚಲನವಲನವನ್ನು ನಿರ್ವಹಿಸುತ್ತಾರೆ, ಪತ್ರ ಮೊದಲಾದವುಗಳನ್ನು ಹೊರಡಿಸುವುದಕ್ಕಾಗಿ ಜವಾಬ್ದಾರರಾಗಿರುತ್ತಾರೆ. ಅವರು ಕರ್ನಾಟಕ ಸಚಿವಾಲಯ ಕೈಪಿಡಿ ಪ್ರಕಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಜೆ) ಶೀಘ್ರಲಿಪಿಗಾರರು:** ಅಧೀನ ಕಾರ್ಯದರ್ಶಿ, ಉಪ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿಯವರಿಗೆ ಶೀಘ್ರಲಿಪಿಗಾರರು ಇರುತ್ತಾರೆ. ಅವರು ಅಧಿಕಾರಿಗಳು ನೀಡಿರುವ ಉಕ್ತಲೇಖನವನ್ನು ಬೆರಳಚ್ಚು ಮಾಡುತ್ತಾರೆ ಮತ್ತು ಅಧಿಕಾರಿಗಳ ನಿರ್ದೇಶನಗಳ ಪ್ರಕಾರ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ. ಪ್ರಧಾನ ಕಾರ್ಯದರ್ಶಿಗಳಿಗೆ ಸಂಬಂಧಪಟ್ಟ ಶೀಘ್ರಲಿಪಿಗಾರರು / ಆಪ್ತ ಸಿಬ್ಬಂದಿ ವರ್ಗದವರು ಸಾರಿಗೆ ಇಲಾಖೆಯ ಪ್ರಥಮ ಶ್ರೇಣಿಯ ಅಧಿಕಾರಿಗಳ ಎಪಿಆರ್‌ಗಳಿಗೆ ಸಂಬಂಧಪಟ್ಟ ಕೆಲಸಕಾರ್ಯಗಳನ್ನು ಸಹ ನಿರ್ವಹಿಸುತ್ತಾರೆ. ಅವರು ಕರ್ನಾಟಕ ಸಚಿವಾಲಯ ಕೈಪಿಡಿಯ ಪ್ರಕಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

**ಕೆ) ಬೆರಳಚ್ಚುಗಾರರು:** ಶಾಖೆಗಳಿಗೆ ಸಂಬಂಧಪಟ್ಟಂತೆ ಬೆರಳಚ್ಚುಗಾರರು ಇರುತ್ತಾರೆ. ಅವರು ಶಾಖೆಯಲ್ಲಿನ ಬೆರಳಚ್ಚು ಕಾರ್ಯವನ್ನು ನಿರ್ವಹಿಸುತ್ತಾರೆ.

**ಎಲ್) ದಲಾಯತರು (ಶ್ರೇಣಿ–IV):** ದಲಾಯತರು ಕಚೇರಿಯನ್ನು ಅಚ್ಚುಕಟ್ಟಾಗಿ ಮತ್ತು ಚೊಕ್ಕಟವಾಗಿಡುತ್ತಾರೆ. ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿರುವ ಸೂಚನೆಗಳ ಪ್ರಕಾರ ಅವರು ಇತರ ಶಾಖೆಗಳಿಗೆ / ಇಲಾಖೆಗಳಿಗೆ ಕಡತಗಳನ್ನು / ಟಪಾಲುಗಳನ್ನು ತಲುಪಿಸುತ್ತಾರೆ. ಮುಕ್ತಾಯ ಮಾಡಲಾದ ಕಡತಗಳನ್ನು ಒಟ್ಟಿಗೆ ಸೇರಿಸಿ ಹೊಲಿದು, ಅವುಗಳನ್ನು ಸಾಮಾನ್ಯ ದಾಖಲೆ ಶಾಖೆಗೆ ತಲುಪಿಸುತ್ತಾರೆ.

**(iii) ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಗಳ ಹಂತಗಳೂ ಸೇರಿದಂತೆ ತೀರ್ಮಾನವನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

ಎ) ತೀರ್ಮಾನವನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಲಾಗುವಂತಹ ಕಾರ್ಯವಿಧಾನವು ಹೀಗಿದೆ:

**ವಿಷಯ ನಿರ್ವಾಹಕ:** ಇವರು ಪ್ರಸ್ತಾವನೆಯನ್ನು ಸ್ವೀಕರಿಸಿದ ನಂತರ ಹೊಸ ಕಡತವನ್ನು ತೆರೆಯುತ್ತಾರೆ ಅಥವಾ ಈಗಾಗಲೇ ಇರುವ ಕಡತದಲ್ಲಿನ ಪತ್ರಗಳ ಮಾಹಿತಿಯನ್ನು ಪರಿಶೀಲಿಸುತ್ತಾರೆ.

**ಶಾಖಾಧಿಕಾರಿ: ಇವರು** ಪ್ರಸ್ತಾವನೆಗೆ ಸಂಬಂಧಪಟ್ಟ ಎಲ್ಲ ಅಂಶಗಳನ್ನು ಪರಿಶೀಲಿಸುತ್ತಾರೆ ಮತ್ತು ಕೈಗೊಳ್ಳಬೇಕಾದ ಮುಂದಿನ ಕ್ರಮಕ್ಕಾಗಿ ಕಡತವನ್ನು ಅಧೀನ ಕಾರ್ಯದರ್ಶಿಗಳಿಗೆ ಗುರುತು ಮಾಡಿ ಕಳುಹಿಸುತ್ತಾರೆ.

**ಅಧೀನ ಕಾರ್ಯದರ್ಶಿ:ಇವರು** ಅದರ ಸೂಕ್ತ ಕ್ರಮವನ್ನು ಸೂಚಿಸುತ್ತಾರೆ ಅಥವಾ ಬೇರೆ ರೀತಿಯಾದ ಕ್ರಮವನ್ನು ಸೂಚಿಸುತ್ತಾರೆ ಮತ್ತು ಇರುವಂತಹ ನಿಯಮಗಳು ಅಥವಾ ಅಧಿನಿಯಮಗಳ ಉಪಬಂಧಗಳು, ಪೂರ್ವ ನಿದರ್ಶನ ಪ್ರಕರಣಗಳ ಹಿನ್ನೆಲೆಯಲ್ಲಿ ಅದರ ಅರ್ಥವನ್ನು ವಿವರಿಸುತ್ತಾರೆ ಅಥವಾ ನಿಯೋಜಿತವಾದ ಅಧಿಕಾರಗಳ ಮೇರೆಗೆ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ.

**ಉಪಕಾರ್ಯದರ್ಶಿ:** ಇವರು ಪ್ರಕರಣವನ್ನು ಸಮಗ್ರ ದೃಷ್ಟಿಯಲ್ಲಿ ಪರಿಶೀಲಿಸಿ, ಪರಿಶೀಲನೆಯಲ್ಲಿರುವಂತಹ ಪ್ರಸ್ತಾವನೆಗೆ ಸಂಬಂಧಪಟ್ಟಂತೆ ಅಳವಡಿಸಿಕೊಳ್ಳಬೇಕಾದ ಅಂತಿಮ ಕ್ರಮದ ಅನುಮೋದನೆಗಾಗಿ ಪ್ರಧಾನ ಕಾರ್ಯದರ್ಶಿಗಳಿಗೆ ಕಡತವನ್ನು ಸಲ್ಲಿಸುತ್ತಾರೆ ಅಥವಾ ನಿಯೋಜಿತವಾದ ಅಧಿಕಾರಗಳ ಮೇರೆಗೆ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ.

**ಪ್ರಧಾನ ಕಾರ್ಯದರ್ಶಿ:** ಇವರು ನಿಯೋಜಿತ ಅಧಿಕಾರಗಳ ಮೇರೆಗೆ ಪ್ರಸ್ತಾವನೆ ಕುರಿತಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆ ಮತ್ತು, ಅಗತ್ಯವಾದರೆ, ಸಂದರ್ಭಾನುಸಾರ, ಸಾರಿಗೆ ಇಲಾಖೆಯ ಮಾನ್ಯ ಸಚಿವರಿಗೆ ಅಥವಾ ಸರ್ಕಾರಕ್ಕೆ ಅಂತಿಮ ಆದೇಶಗಳಿಗಾಗಿ ಕಡತವನ್ನು ಸಲ್ಲಿಸುತ್ತಾರೆ.

(ಬಿ) ಮೇಲ್ವಿಚಾರಣೆಯ ಹಂತಗಳು:–

**ಮೋಟಾರು ವಾಹನಗಳ ಶಾಖೆ:**

ವಿಷಯ ನಿರ್ವಾಹಕ: → ಫೀಠಾಧಿಕಾರಿ: → ಉಪಕಾರ್ಯದರ್ಶಿ: → ಪ್ರಧಾನ ಕಾರ್ಯದರ್ಶಿ

**ರಾಜ್ಯ ಸಾರಿಗೆ ನಿಗಮ ಶಾಖೆ:**

ವಿಷಯ ನಿರ್ವಾಹಕ: → ಶಾಖಾಧಿಕಾರಿ: → ಅಧೀನ ಕಾರ್ಯದರ್ಶಿ: → ಪ್ರಧಾನ ಕಾರ್ಯದರ್ಶಿ

**ಆಂತರಿಕ ಹಣಕಾಸು ಸಲಹೆಗಾರರು (ಅಭಿಪ್ರಾಯ):**

ವಿಷಯ ನಿರ್ವಾಹಕ: → ಶಾಖಾಧಿಕಾರಿ: → ಆಂತರಿಕ ಹಣಕಾಸು ಸಲಹೆಗಾರ: → ಪ್ರಧಾನ ಕಾರ್ಯದರ್ಶಿ

**ಆಂತರಿಕ ಹಣಕಾಸು ಸಲಹೆಗಾರರು (ಬಜೆಟ್):**

ವಿಷಯ ನಿರ್ವಾಹಕ: → ಶಾಖಾಧಿಕಾರಿ: → ಆಂತರಿಕ ಹಣಕಾಸು ಸಲಹೆಗಾರ: → ಪ್ರಧಾನ ಕಾರ್ಯದರ್ಶಿ

**ಕಾನೂನು ಕೋಶ:**

ವಿಷಯ ನಿರ್ವಾಹಕ: → ಅಧೀನ ಕಾರ್ಯದರ್ಶಿ: → ಕಾನೂನು ಕೋಶದ ಮುಖ್ಯಸ್ಥರು:
→ ಪ್ರಧಾನ ಕಾರ್ಯದರ್ಶಿ

**(iv) ಪ್ರಕಾರ್ಯಗಳ ನಿರ್ವಹಣೆಗಾಗಿ ನಿರೂಪಿಸಲಾದ ಮಾದರಿಗಳು:**

ದಲಾಯತ್: ಆತನು ತನಗೆ ವಹಿಸಿಕೊಡಲಾದ ಕೆಲಸಗಳನ್ನು ಆ ದಿನದಂದೇ ನಿರ್ವಹಿಸಬೇಕು.

ಕಿರಿಯ ಸಹಾಯಕ: ಆತನು ತನಗೆ ವಹಿಸಿಕೊಡಲಾದ ಕೆಲಸಗಳನ್ನು ಆ ದಿನದಂದೇ ನಿರ್ವಹಿಸಬೇಕು.

ವಿಷಯನಿರ್ವಾಹಕರು (ಕರ್ನಾಟಕ ಸಚಿವಾಲಯ ಕೈಪಿಡಿ ಪ್ರಕಾರ) ಕಡತಗಳನ್ನು,/ ಟಪಾಲುಗಳನ್ನು 5 ದಿನಗಳವರೆಗೂ ಸಲ್ಲಿಸಬೇಕು.

| | |
|---|---|
| ಶಾಖಾಧಿಕಾರಿ<br>ಅಧೀನ ಕಾರ್ಯದರ್ಶಿ<br>ಉಪ ಕಾರ್ಯದರ್ಶಿ<br>ಪ್ರಧಾನ ಕಾರ್ಯದರ್ಶಿ | ಆದ್ಯತೆಯ ಮೇಲೆ ಕೆಲಸವನ್ನು ನಿರ್ವಹಿಸಬೇಕು. |

**(V) ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ, ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಅಥವಾ ನೌಕರರು ಬಳಸುವ ನಿಯಮಗಳು, ವಿನಿಯಮನಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು**

(1) ಕೇಂದ್ರ ಮೋಟಾರು ವಾಹನಗಳ ಅಧಿನಿಯಮ, 1988
(2) ಕರ್ನಾಟಕ ಮೋಟಾರು ವಾಹನಗಳ ನಿಯಮಗಳು, 1989
(3) ಕರ್ನಾಟಕ ಮೋಟಾರು ವಾಹನಗಳ ತೆರಿಗೆ ನಿರ್ಧರಣೆ ಅಧಿನಿಯಮ, 1957
(4) ಕರ್ನಾಟಕ ಮೋಟಾರು ವಾಹನಗಳ ತೆರಿಗೆ ನಿರ್ಧರಣ ನಿಯಮಗಳು, 1957
(5) ರಸ್ತೆ ಸಾರಿಗೆ ನಿಗಮ ಅಧಿನಿಯಮ, 1950
(6) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಗಳು, 1961
(7) ಕರ್ನಾಟಕ ಸಿವಿಲ್ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1974
(8) ಇಲಾಖಾ ಬಡ್ತಿ ಸಮಿತಿಗಳು
(9) ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೌಕರಿಭರ್ತಿ) ನಿಯಮಗಳು, 1977
(10) ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977
(11) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳ ಮೀಸಲಾತಿ ರೋಸ್ಟರ್
(12) ಕರ್ನಾಟಕ ಸಿವಿಲ್ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು, 1994
(13) ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಯಮನ, 2000
(14) ಸೇವೆಯಲ್ಲಿರುವಾಗ ಮೃತರಾದ ಸರ್ಕಾರಿ ನೌಕರರ ಅವಲಂಬಿತರಿಗೆ ಅನುಕಂಪ ಆಧಾರದಲ್ಲಿ ನೇಮಕಾತಿ
(15) ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957
(16) ಕರ್ನಾಟಕ ಸಿವಿಲ್ ಸೇವಾ (ನಡವಳಿಕೆ) ನಿಯಮಗಳು, 1966
(17) ಕರ್ನಾಟಕ ಸರ್ಕಾರಿ (ವ್ಯವಹಾರದ ಹಂಚಿಕೆ) ನಿಯಮಗಳು, 1977
(18) ಕರ್ನಾಟಕ ಕಾರ್ಯನಿರ್ವಹಣಾ ನಿಯಮಗಳು, 1977
(19) ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಚಿಕಿತ್ಸೆ) ನಿಯಮಗಳು, 1963
(20) ಕರ್ನಾಟಕ ಸಿವಿಲ್ ಸೇವಾ ನಿಯಮಗಳು

**(vi) ಅದು ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ದಾಖಲೆಗಳ ಪ್ರವರ್ಗ:**

ಸಾರಿಗೆ ಇಲಾಖೆ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ದೇವರಾಜ ಅರಸ್ ಟ್ರಕ್ ಟರ್ಮಿನಲ್ ಸಂಸ್ಥೆ – ಇವುಗಳಿಗೆ ಸಂಬಂಧಪಡುವ ಎಲ್ಲಾ ಕಡತಗಳನ್ನು ಸಾರಿಗೆ ಸಚಿವಾಲಯವು ನಿರ್ವಹಿಸುತ್ತದೆ ಮತ್ತು ಪರಿಷ್ಕರಿಸುತ್ತದೆ.

**(vii) ರಚನಾ ನೀತಿ ಅಥವಾ ಅದರ ಅನುಷ್ಠಾನದ ಸಂಬಂಧದಲ್ಲಿ ಸಾರ್ವಜನಿಕರೊಡನೆ ಸಮಾಲೋಚನೆ ನಡೆಸುವುದಕ್ಕಾಗಿ ಅಥವಾ ಅವರ ಪ್ರಾತಿನಿಧ್ಯಕ್ಕಾಗಿ ಮಾಡಲಾದ ಏರ್ಪಾಡುಗಳ ವಿವರಗಳು:**

ತೆಗೆದುಕೊಂಡಿರುವ ಕಾರ್ಯನೀತಿ ನಿರ್ಧಾರಗಳು ಹಾಗೂ ಮಾಡಿರುವ ಅನುಷ್ಠಾನವು ಮೋಟಾರು ವಾಹನಗಳ ಅಧಿನಿಯಮ ಮತ್ತು ನಿಯಮಗಳಲ್ಲಿ ಒಳಗೊಂಡಿರುತ್ತವೆ. ಅಂಥ ಸಮಾಲೋಚನೆಗಾಗಿ ಅಧಿನಿಯಮ ಮತ್ತು ನಿಯಮಗಳಲ್ಲಿ ಉಪಬಂಧವನ್ನು ಕಲ್ಪಿಸಿದ್ದರೆ, ತದನುಸಾರವಾಗಿ ಕ್ರಮ ಕೈಗೊಳ್ಳಲಾಗುವುದು.

**(viii) ಸಲಹೆಯ ಉದ್ದೇಶಕ್ಕಾಗಿ ಮಂಡಳಿಗಳ, ಪರಿಷತ್ತುಗಳ, ಸಮಿತಿ ಇತ್ಯಾದಿಗಳ ವಿವರಣೆ:**

ಸಾರಿಗೆ ಸಚಿವಾಲಯದಲ್ಲಿ ಅಂಥ ಯಾವುವೇ ಮಂಡಳಿಗಳು, ಪರಿಷತ್ತುಗಳು ಅಥವಾ ಸಮಿತಿಗಳು ಇಲ್ಲ.

**(ix) ಅಧಿಕಾರಿಗಳು ಮತ್ತು ನೌಕರರ ನಿರ್ದೇಶಿಕೆ:**

**ಸಾರಿಗೆ ಇಲಾಖೆ**

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ದೂರವಾಣಿ ಸಂಖ್ಯೆ |
|---|---|---|---|
| 1 | 2 | 3 | 4 |
| 1 | ಉಪೇಂದ್ರ ತ್ರಿಪಾಠಿ, ಐಎಎಸ್ | ಸರ್ಕಾರದ ಪ್ರಧಾನ ಕಾರ್ಯದರ್ಶಿ | 080–22353912<br>080–26685922® |

| ಕ್ರ. ಸಂ. | ಅಧಿಕಾರಿಯ ಹೆಸರು ಶ್ರೀ / ಶ್ರೀಮತಿ | ಪದನಾಮ | ದೂರವಾಣಿ ಸಂಖ್ಯೆ |
|---|---|---|---|
| 2 | ಕೆ.ವಿ. ಪ್ರಸಾದ್ | ಸರ್ಕಾರದ ಉಪ ಕಾರ್ಯದರ್ಶಿ | 080–22353962<br>080–22032213<br>080–23425819 ® |
| 3 | ಕೆ.ಎಸ್. ಶ್ರೀಧರ | ಸರ್ಕಾರದ ಅಧೀನ ಕಾರ್ಯದರ್ಶಿ | 080–22032292 |
| 4 | ಎನ್. ಸರ್ವಮಂಗಳ | ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಗೆಜೆಟೆಡ್ ಆಪ್ತ ಸಹಾಯಕರು | 080–22353912 |
| 5 | ಎಂ. ಹರಿಹರಸ್ವಾಮಿ | ಶಾಖಾಧಿಕಾರಿ, ಸಾರಿಗೆ–1 ಶಾಖೆ | 080–22032914 |
| 6 | ಎಂ.ಆರ್. ಚಂದ್ರಶೇಖರ ಆರಾಧ್ಯ | ಶಾಖಾಧಿಕಾರಿ, ಸಾರಿಗೆ–2 ಶಾಖೆ | 080–22032014 |
| 7 | ಪಿ.ಎಸ್. ಪ್ರಭಾಕರ | ಶಾಖಾಧಿಕಾರಿ, ಸಾರಿಗೆ – ಆರ್ ಮತ್ತು ಐಸಿ | 080–22032336 |
| 8 | ಟಿ.ಎನ್. ನರಸಿಂಹರಾಜು | ಹಿರಿಯ ಸಹಾಯಕರು, ಸಾರಿಗೆ –2 ಶಾಖೆ | 080–22032014 |
| 9 | ಚಂದ್ರಕಾಂತ | ಹಿರಿಯ ಸಹಾಯಕರು, ಸಾರಿಗೆ–1 ಶಾಖೆ | 080–22032914 |
| 10 | ಎಚ್. ವನಿತಾ | ಸಹಾಯಕರು, ಸಾರಿಗೆ–1 ಶಾಖೆ | 080–22032914 |
| 11 | ಮಹಾಂತೇಶ್ ವಿ. ಚಿವುಟಗುಂಡಿ | ಸಹಾಯಕರು, ಸಾರಿಗೆ–1 ಶಾಖೆ | 080–22032914 |
| 12 | ಬಿ. ಕೃಷ್ಣೋಜಿ ರಾವ್ | ಸಹಾಯಕರು, ಸಾರಿಗೆ–2 ಶಾಖೆ | 080–22032014 |
| 13 | ಶಾಂತಕುಮಾರ್ ಕೆ.ಎಂ. | ಹಿರಿಯ ಸಹಾಯಕರು, ಪ್ರಧಾನ ಕಾರ್ಯದರ್ಶಿಯವರ ಕಛೇರಿ | 080–22353912 |
| 14 | ಎನ್.ಎಸ್. ಗಾಯತ್ರಿ ದೇವಿ | ಶೀಘ್ರಲಿಪಿಕಾರರು, ಪ್ರಧಾನ ಕಾರ್ಯದರ್ಶಿಯವರ ಕಛೇರಿ | 080–22353912<br>080–26665016<br>080–26716529 |
| 15 | ವಿದ್ಯಾ ಎಚ್. ಪೈ | ಶೀಘ್ರಲಿಪಿಕಾರರು, ಅಧೀನ ಕಾರ್ಯದರ್ಶಿಯವರ ಕಛೇರಿ | 080–22032292 |
| 16 | ಮಲ್ಲಿನಾಥ್ | ಶೀಘ್ರಲಿಪಿಕಾರರು, ಉಪ ಕಾರ್ಯದಶಿಯವರ ಕಛೇರಿ | 080–22353962 |
| 17 | ಎನ್. ರಾಜಣ್ಣ | ಕಿರಿಯ ಸಹಾಯಕರು, ಸಾರಿಗೆ–2 ಶಾಖೆ | 080–22032014 |
| 18 | ಗಿರೀಶ್ ಭಟ್ | ಕಿರಿಯ ಸಹಾಯಕರು, ಸಾರಿಗೆ, ಉಪ ಕಾರ್ಯದರ್ಶಿಯವರ ಶಾಖೆ | 080–22353962 |
| 19 | ವೇಣುಗೋಪಾಲ | ಕಿರಿಯ ಸಹಾಯಕರು, ಸಾರಿಗೆ–1 ಶಾಖೆ | 080–22032914 |

**(X) ನಷ್ಟ ಪರಿಹಾರ ವ್ಯವಸ್ಥೆಯನ್ನು ಒಳಗೊಂಡಂತೆ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರು ಪಡೆಯುತ್ತಿರುವ ಮಾಸಿಕ ವೇತನ:**

| **ಕ್ರ. ಸಂ.** | **ಅಧಿಕಾರಿಯ ಹೆಸರು ಮತ್ತು ಪದನಾಮ** | **ಒಟ್ಟು ವೇತನ (ಒಟ್ಟು ಸಂಬಳ)** |
|---|---|---|
| **1** | **2** | **3** |
| 1 | **ಉಪೇಂದ್ರ ತ್ರಿಪಾಠಿ, ಐಎಎಸ್**<br>ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಸಾರಿಗೆ ಇಲಾಖೆ | 93,665.00 |
| 2 | ಕೆ.ವಿ. ಪ್ರಸಾದ್<br>ಸರ್ಕಾರದ ಉಪ ಕಾರ್ಯದರ್ಶಿ<br>ಸಾರಿಗೆ ಇಲಾಖೆ | 33,257.00 |
| 3 | ಕೆ.ಎಸ್. ಶ್ರೀಧರ<br>ಸರ್ಕಾರದ ಉಪ ಕಾರ್ಯದರ್ಶಿ<br>ಸಾರಿಗೆ ಇಲಾಖೆ | 21,379.00 |
| ಕ್ರ. | ಅಧಿಕಾರಿಯ ಹೆಸರು ಮತ್ತು ಪದನಾಮ | ಒಟ್ಟು ವೇತನ |

| ಸಂ. | | (ಒಟ್ಟು ಸಂಬಳ) |
|---|---|---|
| 4 | ಎಂ. ಹರಿಹರಸ್ವಾಮಿ<br>ಶಾಖಾಧಿಕಾರಿ | 22,413.00 |
| 5 | ಎಂ.ಆರ್. ಚಂದ್ರಶೇಖರ ಆರಾಧ್ಯ<br>ಪೀಠಾಧಿಕಾರಿ (ಡೆಸ್ಕ್ ಆಫೀಸರ್) | 18,208.00 |
| 6 | ಪಿ.ಎಸ್. ಪ್ರಭಾಕರ, ಶಾಖಾಧಿಕಾರಿ | 26,776.00 |
| 7 | ಎನ್. ಸರ್ವಮಂಗಳ<br>ಗೆಜೆಟೆಡ್ ಆಪ್ತ ಸಹಾಯಕರು | 21,800.00 |
| 8 | ಟಿ.ಎನ್. ನರಸಿಂಹರಾಜು<br>ಹಿರಿಯ ಸಹಾಯಕರು | 16,880.00 |
| 9 | ಚಂದ್ರಕಾಂತ,<br>ಹಿರಿಯ ಸಹಾಯಕರು | 16,804.00 |
| 10 | ಕೆ.ಎಂ. ಶಾಂತಕುಮಾರ್<br>ಹಿರಿಯ ಸಹಾಯಕರು | 18,778.00 |
| 11 | ಎನ್.ಎಸ್. ಗಾಯತ್ರಿ ದೇವಿ<br>ಶೀಘ್ರಲಿಪಿಗಾರರು | 14,001.00 |
| 12 | ವಿದ್ಯಾ ಎಚ್. ಪೈ.<br>ಶೀಘ್ರಲಿಪಿಕಾರರು | 13,607.00 |
| 13 | ಮಲ್ಲಿನಾಥ್<br>ಶೀಘ್ರಲಿಪಿಕಾರರು | 12,691.00 |
| 14 | ಎಚ್. ವನಿತಾ<br>ಸಹಾಯಕರು | 14,171.00 |
| 15 | ಕೃಷ್ಣೋಜಿರಾವ್<br>ಸಹಾಯಕರು | 12,272.00 |
| 16 | ಮಹಾಂತೇಶ್ ವಿ. ಚಿವುಟಗುಂಡಿ<br>ಸಹಾಯಕರು | 12,596.00 |
| 17 | ಎನ್. ರಾಜಣ್ಣ<br>ಕಿರಿಯ ಸಹಾಯಕರು | 12,272.00 |
| 18 | ಗಿರೀಶ್ ಭಟ್ | 8917.00 |
| 19 | ವೇಣುಗೋಪಾಲ, ಕಿರಿಯ ಸಹಾಯಕರು | 8,563.00 |
| 20 | ಮೋಹನ್ ಸಿಂಗ್. ಬಿ, ದಲಾಯತ್ | 13,747.00 |
| 21 | ಶಂಕರ್ ಎಂ.ಎಸ್. ಜಮೇದಾರ್ | 12,507.00 |
| 22 | ಶೋಭಾ, ದಲಾಯತ್ | 9,361.00 |
| 23 | ಪುಟ್ಟನಿಂಗಮ್ಮ, ದಲಾಯತ್ | 8,637.00 |

**ಟಿಪ್ಪಣಿ: ಆಂತರಿಕ ಹಣಕಾಸು ಸಲಹೆಗಾರರು (ಐಎಫ್ಎ) ಶಾಖೆ ಮತ್ತು ಕಾನೂನು ಮುಖ್ಯ ಶಾಖೆಯ ಸಂಬಂಧದಲ್ಲಿನ ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆಯನ್ನು ಗೃಹ ಇಲಾಖೆಯಿಂದ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.**

**(xi) ಎಲ್ಲ ಯೋಜನೆಗಳು, ಉದ್ದೇಶಿತ ವೆಚ್ಚ ಮತ್ತು ಬಟವಾಡೆ ಮಾಡಿದ್ದರ ಬಗೆಗಿನ ವರದಿಗಳ ವಿವರಗಳೊಂದಿಗೆ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಬಜೆಟ್:**

| ಕ್ರ. ಸಂ. | ಇಲಾಖೆ / ಸಂಸ್ಥೆ | 2008–09ನೇ ಸಾಲಿನ ಬಜೆಟ್ (ರೂ. ಲಕ್ಷಗಳಲ್ಲಿ) | |
|---|---|---|---|
| **1** | **2** | **3** | |
| | | **ಎಸ್.ಸಿ. ಅಂಗೀಕಾರಗಳು (ಯೋಜನೇತರ)** | **ರಸ್ತೆ ಸಾರಿಗೆಯ ಮೇಲಿನ ಬಂಡವಾಳ ವೆಚ್ಚ (ಯೋಜನೆ)** |
| 1 | ಸಾರಿಗೆ | 0.00 | 101.22 |
| 2 | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ | 5110.64 | 3500.00 |
| 3 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ | 4910.64 | 0.00 |
| **ಕ್ರ.** | **ಇಲಾಖೆ / ಸಂಸ್ಥೆ** | **2008–09ನೇ ಸಾಲಿನ ಬಜೆಟ್** | |

| ಸಂ. | | (ರೂ. ಲಕ್ಷಗಳಲ್ಲಿ) | |
|---|---|---|---|
| 1 | 2 | 3 | |
| | | ಎಸ್.ಸಿ. ಅಂಗೀಕಾರಗಳು (ಯೋಜನೇತರ) | ರಸ್ತೆ ಸಾರಿಗೆಯ ಮೇಲಿನ ಬಂಡವಾಳ ವೆಚ್ಚ (ಯೋಜನೆ) |
| 4 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | 1946.88 | 3000.00 |
| 5 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ | 1,947.84 | 8500.00 |
| 6 | ಡಿ. ದೇವರಾಜ್ ಅರಸ್ ಟ್ರಕ್ ಟರ್ಮಿನಲ್ಸ್ ಸಂಸ್ಥೆ | 0.00 | 1000.00 |
| 7 | ಚಾಲನೆ ಪರೀಕ್ಷೆ ಸೌಕರ್ಯಗಳು | 0.00 | 200.00 |
| 8 | ನಗರ ಸಾರಿಗೆಯ ಮೂಲ ಸೇವೆಗಳು (ಜೆಎನ್ ನರ್ಮ್) | 0.00 | 0000.00 |
| | ಒಟ್ಟು | **16916.00** | **26301.00** |

| ಕ್ರ. ಸಂ. | ಹೆಸರು ಪದ್ಧತಿ (ಯೋಜನೇತರ) | 2008–09ನೇ ಸಾಲಿನ ಬಜೆಟ್ (ರೂ. ಲಕ್ಷಗಳಲ್ಲಿ) | |
|---|---|---|---|
| 1 | ಸ್ವಾತಂತ್ರ್ಯ ಹೋರಾಟಗಾರರು | ಕೆಎಸ್‌ಆರ್‌ಟಿಸಿ | 327.49 |
| 2 | ಅಂಧರಿಗೆ ಉಚಿತ ಬಸ್ ಪ್ರಯಾಣ ಸೌಲಭ್ಯ | ಕೆಎಸ್‌ಆರ್‌ಟಿಸಿ | 959.30 |
| 3 | ಅಂಗವಿಕಲರಿಗೆ ರಿಯಾಯಿತಿ ಬಸ್ ಪ್ರಯಾಣ ಸೌಲಭ್ಯ | ಕೆಎಸ್‌ಆರ್‌ಟಿಸಿ | 639.80 |

**(xii) ಹಂಚಿಕೆ ಮಾಡಿದ ಮೊತ್ತದೊಂದಿಗೆ ಸಹಾಯಕ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಮತ್ತು ಅಂಥ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳು:**

ಸಾರಿಗೆ ಸಚಿವಾಲಯವು ಯಾವುದೇ ಸಹಾಯಕ ಕಾರ್ಯಕ್ರಮವನ್ನು ನೇರವಾಗಿ ನಿರ್ವಹಿಸುವುದಿಲ್ಲ. ಆದರೆ ಇದು ಸಹಾಯಕ ಕಾರ್ಯಕ್ರಮಗಳಿಗೆ ನಿಧಿಗಳನ್ನು ಮಂಜೂರು ಮಾಡುತ್ತದೆ.

**(xiii) ರಿಯಾಯಿತಿಗಳು, ಪರ್ಮಿಟ್ಟುಗಳು ಅಥವಾ ಅಧಿಕಾರ ಪತ್ರ ಪಡೆದುಕೊಂಡವರ ವಿವರಗಳು:**

ಸಾರಿಗೆ ಸಚಿವಾಲಯವು ಬಾಬು ಸಂ.(xii)ರಲ್ಲಿ ವಿವರಿಸಲಾದಂತಹ ನಿಧಿಗಳನ್ನು ಮಂಜೂರು ಮಾಡುತ್ತದೆ. ಮೋಟಾರು ವಾಹನಗಳ ಅಧಿನಿಯಮದ ಪ್ರಕಾರ ಮೋಟಾರು ವಾಹನಗಳಿಗೆ ಪರ್ಮಿಟ್ಟುಗಳನ್ನು ಸಾರಿಗೆ ಇಲಾಖೆ (ಕ್ಷೇತ್ರ ಇಲಾಖೆ)ಯಿಂದ ಮಂಜೂರು ಮಾಡಲಾಗುತ್ತದೆ.

**(xiv) ವಿದ್ಯುನ್ಮಾನ ರೂಪದಲ್ಲಿ ಹೊಂದಿರುವ ಮಾಹಿತಿಯ ಸಂಬಂಧದಲ್ಲಿನ ವಿವರಗಳು**

ಇಲ್ಲ

**(xv) ಸಾರ್ವಜನಿಕ ಉಪಯೋಗಕ್ಕಾಗಿ ಗ್ರಂಥಾಲಯ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದರೆ ಅವುಗಳು ಸೇರಿದಂತೆ ಇತರ ಮಾಹಿತಿಯನ್ನು ಪಡೆದುಕೊಳ್ಳುವುದಕ್ಕಾಗಿ ನಾಗರಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳು: ಸಾರಿಗೆ ಸಚಿವಾಲಯವು ಯಾವುದೇ ಅಂತಹ ಗ್ರಂಥಾಲಯವನ್ನು ನಿರ್ವಹಿಸುತ್ತಿಲ್ಲ.**

**(xvi) ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು, ಪದನಾಮ ಮತ್ತು ಇತರೆ ವಿವರಗಳು:**

ಶ್ರೀ ಕೆ.ಎಸ್. ಶ್ರೀಧರ,
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ, ಕೊಠಡಿ ಸಂಖ್ಯೆ 125, 1ನೇ ಮಹಡಿ,
ಬಹುಮಹಡಿ ಕಟ್ಟಡ, ಬೆಂಗಳೂರು–01, ದೂರವಾಣಿ ನಂ. 080–22032292.

**2) ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮಗಳು ಮತ್ತು ಇತರ ವಿವರಗಳು**

**(i) ಶ್ರೀ ಎಂ. ಆರ್. ಚಂದ್ರಶೇಖರ ಆರಾಧ್ಯ,**
ಪೀಠಾಧಿಕಾರಿ, ರಾಜ್ಯ ಸಾರಿಗೆ – 2 ಶಾಖೆ, ಸಾರಿಗೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ, ಕೊಠಡಿ ಸಂಖ್ಯೆ 122, 1ನೇ ಮಹಡಿ,
ಬಹುಮಹಡಿ ಕಟ್ಟಡ, ಬೆಂಗಳೂರು–01, ದೂರವಾಣಿ ನಂ. 080–22032014.

**(ii) ಶ್ರೀ ಎಂ. ಹರಿಹರ ಸ್ವಾಮಿ,**

ಶಾಖಾಧಿಕಾರಿ, ರಾಜ್ಯ ಸಾರಿಗೆ ಸಂಸ್ಥೆಗಳ ಶಾಖೆ–1,
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ,
ಕೊಠಡಿ ಸಂಖ್ಯೆ 101, 1ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು–01,
ದೂರವಾಣಿ ನಂ. 080–22032914.

**(iii)** ಶ್ರೀ ಪಿ.ಎಸ್. ಪ್ರಭಾಕರ,
ಶಾಖಾಧಿಕಾರಿ, ಸ್ವೀಕೃತಿ, ರವಾನೆ ಮತ್ತು ಸಮನ್ವಯ ಶಾಖೆ,
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ,
ಕೊಠಡಿ ಸಂಖ್ಯೆ 101, 1ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು–01,
ದೂರವಾಣಿ ನಂ. 080–22032336.

**(xvii) ಗೊತ್ತುಪಡಿಸಬಹುದಾದಂಥ ಇತರೆ ಮಾಹಿತಿ.**

– ಇಲ್ಲ –

**ಕೆ.ವಿ. ಪ್ರಸಾದ್**
ಸರ್ಕಾರದ ಉಪ ಕಾರ್ಯದರ್ಶಿ,
ಸಾರಿಗೆ ಇಲಾಖೆ

ಪಿ.ಆರ್. 170

**FOREST, ECOLOGY & ENVIRONMENT SECRETARIAT**

**NOTIFICATION**

**No. FEE 257 FWL 2007, Bangalore, dated: 02nd March 2009.**

In exercise of the powers conferred by sub-section (1) of the section 6 of the Wildlife (Protection) amendment Act, 2002 the State Government hereby constitutes the State Board for Wildlife consisting of the following members, namely:-

a. **Chief Minister** — **Chair person**

b. **Shri. Ananth Hegde Ashisar,**
**Chairman, Western Ghat Task Force,** — **Vice Chair person**

c. **The following members of State Legislative Assembly** — **Members**
1. Sri. M.P.Kumaraswamy,
MLA., Mudigere
2. Sri. Appachchuranjan,
MLA., Madikeri
3. Sri. Gopalakrishna Belur
MLA., Sagar

d. **The heads of the following non-Government organisations:** — **Members**
1. Janadhwani Vedike,
Field Marshal Cariappa Road, Somavarapet,
2. Vrukshalaksha Andolana Seva Trust,Sagara
3. Nature Conservation Foundation, Mysore

e. **The following eminent Conservationists, Ecologists and Environmentalists:** — **Members**
1. K.B.Girish Ganapati,
Keregundi Estate, Devapura Post,
Gonekoppa.

2. Sanjay Gubbi, Tumkur
3. Girija Shankar Chikkamagalur
4. Dr.Rohini Balakrishnan, CES, IISc, Bangalore
5. Vijaykumar, Hotel Apurva Complex, Park Road, Hassan
6. Dr.N.A.Madhyasta, Zoologist, Udupi
7. Anindya Sinha Professor, National Institute Advanced Studies, IISc.Compus
8. Vani Ragavendra Pai, Potoli, Joida Tq.
9. M.Jadegowda, Asst. Professor, Forestry College, Ponnampete,
10. Prataap Singh Nayak, Beltangadi Tq.

| | | |
|---|---|---|
| f. | The Principal Secretary to the Government of Karnataka, Forest, Environment & Ecology Department, Bangalore | Member |
| g. | The Principal Chief Conservator of Forests, Karnataka, Bangalore | Member |
| h. | The Principal Secretary/Secretary to the Government of Karnataka, Social Welfare Department, Bangalore | Member |
| i. | The Managing Director, Karnataka State Tourism Development Corporation Ltd., Bangalore | Member |
| j. | The Inspector General of Police, Forest Cell, Bangalore | Member |
| k. | A representative of the Armed forces not below the rank of Brigadier as nominated by the Central Government | Member |
| l. | The Director, Animal Husbandry and Veterniary Services, Bangalore | Member |
| m. | The Director, Department of Fisheries, Bangalore | Member |
| n. | An Officer as nominated by the Director, Wildlife Preservation, New Delhi | Member |
| o. | A representative of the Director Wildlife Institute of India, Deharadun | Member |
| p | A representative of the Director Zoological Survey of India, Kolkata | Member |
| q. | A representative of the Director, Botanical Survey of India, Kolkata | Member |
| r. | The Principal Chief Conservator of Forests (Wildlife) and Chief Wildlife Warden, Karnataka, Bangalore | Member Secretary |

By order and in the name of the Governor of Karnataka,
**H.M. MALLIKARJUNASWAMY**
Under Secretary to Government
Forest, Ecology & Environment Department

P.R. 237

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 43 ಎಲ್ಎಂಡಬ್ಲ್ಯೂ 2006, ಬೆಂಗಳೂರು, ದಿನಾಂಕ: 02ನೇ ಮಾರ್ಚ್ 2009.**

ಕರ್ನಾಟಕ ರಾಜ್ಯಾದಂತ " ಫೌಂಡ್ರಿ " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–4 [ಎ], ರಲ್ಲಿ ದಿನಾಂಕ: 3–5–2007 ರಂದು ಪ್ರಕಟಿಸಿ, ಕನಿಷ್ಟ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಪ್ರಕಾರ ಇದರಿಂದ

ಭಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ / ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲವಾದ್ದರಿಂದ ಕರಡು ಪ್ರಸ್ತಾವನೆಯನ್ನು ಕನಿಷ್ಟ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಟ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, ಕನಿಷ್ಟ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 3ನೇ ಪ್ರಕರಣದ [1] ನೇ ಉಪ ಪ್ರಕರಣದ (ಬಿ) ಖಂಡ ಹಾಗೂ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಾಂತ " **ಫೌಂಡ್ರಿ** " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಟ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಟ ವೇತನ ಪ್ರತಿ ತಿಂಗಳಿಗೆ | |
|---|---|---|---|
| | | ವಲಯ–1 | ವಲಯ–2 |
| **1** | 2 | 3 | 4 |
| | | | |
| 1 | ಅತಿ ಕುಶಲ ಕಾರ್ಮಿಕರು<br>**1. ಫೋರ್ಮನ್**<br>2. ಸೂಪರ್‌ವೈಸರ್<br>3. ಚಾರ್ಜ್‌ಹ್ಯಾಂಡ್ ಲೀಡಿಂಗ್ ಹ್ಯಾಂಡ್ | 2805–90 | **2739–70** |
| 2 | ಕುಶಲ ಕಾರ್ಮಿಕರು<br>1. ಮೆಷಿನಿಸ್ಟ್<br>2. ಟರ್ನರ್ಸ್<br>3. ಮೆಕ್ಯಾನಿಕ್<br>4. ಪ್ಯಾಟರ್ನ ಮೇಕರ್<br>5. ಫಿಟ್ಟರ್<br>6. ಕೋರ್ ಮೇಕರ್<br>7. ಮೌಲ್ಡರ್ | 2645–20 | **2573–80** |
| | 8. ಬ್ಲಾಕ್ ಸ್ಮಿತ್<br>9. ಕಾರ್ಪೆಂಟರ್<br>10. ಗ್ರೈಂಡರ್<br>11. ಮಿಲ್ಲರ್<br>12. ವೈಂಡರ್<br>13. ಡೈ ಮೇಕರ್<br>14. ಎಲೆಕ್ಟ್ರೀಷಿಯನ್<br>15. ಮೆಟಲ್ ಪ್ಪೋರರ್ ಶೆಲ್ ಮೌಲ್ಡರ್<br>16. ಇತರ ಕುಶಲ ಕೆಲಸಕ್ಕೆ | 2645–20 | 2573–80 |

| | | | |
|---|---|---|---|
| 3 | ಅರೆಕುಶಲ ಕಾರ್ಮಿಕರು<br>1. ಡ್ರಿಲ್ಲರ್<br>2. ಸ್ಪ್ರೀನ್ ಕಟ್ಟರ್<br>3. ಫೈರ್ಮನ್ ಕಾಪೇಲೈನ್, ಫರ್ನೇಸ್ಮನ್<br>4. ಆಯಿಲ್ ಮೆನ್<br>5. ಪೈಂಟರ್<br>6. ದಿಂಗ್ಲರ್<br>7. ಟಿಂಕರ್<br>8. ಅಸೆಂಬ್ಲರ್<br>9. ನಿಕ್ಕಲ್ ಅಥವಾ ಇತರೆ ಪ್ಲಾಂಟರ್<br>10. ವೈರ್ ಮೆನ್<br>11. ಫಿಟ್ಟರ್<br>12. ಇತರೆ ಅರೆಕುಶಲ ಕೆಲಸಕ್ಕೆ | 2475–10 | 2409–00 |
| 4 | ಕಛೇರಿ ಸಿಬ್ಬಂದಿ<br>1. ಕ್ಲಾರ್ಕ<br>2. ಟೈಪಿಸ್ಟ್<br>3. ಕ್ಯಾಷಿಯರ್<br>4. ಸ್ಟೋರ್ ಕೀಪರ್<br>5. ಅಕೌಂಟೆಂಟ್ | 2475–10 | 2409–00 |
| | 6. ಆಟೋಮೊಬೈಲ್ ಡ್ರೈವರ್ | 2419–50 | **2375–40** |
| | 7. ಜವಾನ, ಕಾವಲುಗಾರ, ಆಫೀಸ್ ಬಾಯ್ | 2105–50 | **2066–70** |
| 5 | ಕುಶಲರಲ್ಲದ ಕಾರ್ಮಿಕರು<br>1. ಸ್ವೀವರ್<br>2. ಕ್ಲೀನರ್<br>3. ಮಜ್ದೂರ್ | | 2105–50 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 2703 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 2703 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2005 ರಿಂದ ಡಿಸೆಂಬರ್ 2005ರ) ಸರಾಸರಿ ಆಧಾರದ ಮೇಲೆ 2006 ಎಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2. ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3. ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ

ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

5. ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6. ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು.
7. ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 10 ಪೈಸೆಗೆ ಪೂರ್ಣಗೊಳಿಸುವುದು.
   (ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
   (ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
   (ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.
9. **ಅತಿ ಕುಶಲ :** ಹೆಚ್ಚಿನ ನೈಪುಣ್ಯತೆಯ ಕೆಲಸ ಮಾಡುವ ಸಾಮರ್ಥ್ಯವುಳ್ಳ, ನಕ್ಷೆಗಳ ಮೇಲೆ ಕೆಲಸ ಮಾಡಬಲ್ಲ ಮತ್ತು ಕುಶಲ ಕೆಲಸಗಾರರ ಗುಂಪಿಗೆ ಹಾಗೂ ಇತರೇ ಕಾರ್ಮಿಕರಿಗೆ ನಿರ್ದೇಶನ ಮಾಡುವ ಸಾಮರ್ಥ್ಯವುಳ್ಳ ಇವರು ದೈನಂದಿನ ಅಥವಾ ತನ್ನ ಕೈಕೆಳಗಿನ ಕೆಲಸ ಸಂಘಟಿಸುವ ಸಾಮರ್ಥ್ಯ ಪಡೆದಿರಬೇಕು.
10. **ಕುಶಲ :** ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ ಮತ್ತು ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.
11. **ಅರೆ ಕುಶಲ :** ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.
12. **ಕುಶಲರಲ್ಲದವರು :** ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಆದರೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನುಗಳ ಜ್ಞಾನವಿರುವ ಕೆಲಸವನ್ನು ಮಾಡುವವರು.

ವಲಯ–1 : ಬೆಂಗಳೂರು ಮಹಾನಗರ ಪಾಲಿಕೆಯ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ಜಿಲ್ಲಾ ಕೇಂದ್ರ ಪ್ರದೇಶಗಳು ಮತ್ತು ಅದಕ್ಕೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

ವಲಯ–2 : ವಲಯ–1 ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 239

**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಕಾಇ 42 ಎಲ್‌ಎಂಡಬ್ಲ್ಯೂ 2006, ಬೆಂಗಳೂರು, ದಿನಾಂಕ: 02ನೇ ಮಾರ್ಚ್ 2009.**

ಕರ್ನಾಟಕ ರಾಜ್ಯಾದಂತ " ವಿನೀರ್ " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–4 [ಎ], ರಲ್ಲಿ ದಿನಾಂಕ: 3–5–2007 ರಂದು ಪ್ರಕಟಿಸಿ, ಕನಿಷ್ಟ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಪ್ರಕಾರ ಇದರಿಂದ ಭಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲವಾದ್ದರಿಂದ ಕರಡು ಪ್ರಸ್ತಾವನೆಯನ್ನು ಕನಿಷ್ಟ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಟ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, ಕನಿಷ್ಟ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 3ನೇ ಪ್ರಕರಣದ [1] ನೇ ಉಪ ಪ್ರಕರಣದ (ಬಿ) ಖಂಡ ಹಾಗೂ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಾಂತ " **ವಿನೀರ್** " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ

ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಟ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

***ಅನುಸೂಚಿ***

<table>
<tr><th>ಕ್ರ. ಸಂ.</th><th>ಕೆಲಸದ ವರ್ಗಗಳು</th><th>ಕನಿಷ್ಟ ವೇತನ ಪ್ರತಿ ತಿಂಗಳಿಗೆ</th></tr>
<tr><td rowspan="3">1</td><td colspan="2">ಯಾರ್ಡ್ ವಿಭಾಗ:</td></tr>
<tr><td>ಅ] ನಾಟಿಗಳನ್ನು ಕೊಯ್ದು ತುಂಡು ಮಾಡುವುದು</td><td>2598–20</td></tr>
<tr><td>ಆ] ನಾಟಿಗಳ ತುಂಡುಗಳನ್ನು ಸಾಗಿಸುವುದು</td><td>2282–10</td></tr>
<tr><td rowspan="8">2</td><td colspan="2">ಫೀಲಿಂಗ್ ವಿಭಾಗ:</td></tr>
<tr><td>ಅ] ಪೀಲಿಂಗ್ ಮೆಷಿನ್ ಆಪರೇಟರ್</td><td>2806–10</td></tr>
<tr><td>ಆ] ಪೀಲಿಂಗ್ ಮೆಷಿನ್ ಸಹಾಯಕ ಆಪರೇಟರ್</td><td>2400–80</td></tr>
<tr><td>ಇ] ಪೀಲಿಂಗ್ ಮೆಷಿನ್ ಸಹಾಯಕ</td><td rowspan="5">2282–10</td></tr>
<tr><td>ಈ] ಪೀಲಿಂಗ್ ಮೆಷಿನ್ ಹೆಲ್ಪರ್</td></tr>
<tr><td>ಉ] ರೀಲಿಂಗ್ ಮೆಷಿನ್ ಆಪರೇಟರ್</td></tr>
<tr><td>ಊ] ರೀಲಿಂಗ್ ಮೆಷಿನ್ ಹೆಲ್ಪರ್</td></tr>
<tr><td>ಋ] ಕ್ಯಾರಿಯರ್</td></tr>
<tr><td rowspan="3">3</td><td colspan="2">ಡ್ರಾಯಿಂಗ್ ವಿಭಾಗ:</td></tr>
<tr><td>ಅ] ಡ್ರಾಯರ್ ಆಪರೇಟರ್</td><td>2598–20</td></tr>
<tr><td>ಆ] ಡ್ರಾಯರ್ ಫೀಡಿಂಗ್‌ಮನ್</td><td>2282–10</td></tr>
<tr><td rowspan="4">4</td><td colspan="2">ಕ್ಲೈಪಿಂಗ್ ವಿಭಾಗ:</td></tr>
<tr><td>ಅ] ಡೆಕೋರೇಟಿವ್ ಕ್ಲೈಪಿಂಗ್ ಆಪರೇಟರ್</td><td>2598–20</td></tr>
<tr><td>ಆ] ಸಹಾಯಕ ಕ್ಲೈಪಿಂಗ್ ಆಪರೇಟರ್</td><td rowspan="2">2407–10</td></tr>
<tr><td>ಇ] ಹೆಲ್ಪರ್</td></tr>
<tr><td rowspan="2">5</td><td colspan="2">ಸಾರ್ಟಿಂಗ್ ವಿಭಾಗ:</td></tr>
<tr><td>ಅ] ಸಾರ್ಟರ್</td><td>2407–10</td></tr>
<tr><td rowspan="4">6</td><td colspan="2">ಗುಲೇಟಿಂಗ್ ಕಟ್ಟರ್</td></tr>
<tr><td>ಅ] ಗುಲೇಟಿಂಗ್ ಕಟ್ಟರ್</td><td>2598–20</td></tr>
<tr><td>ಆ] ಸ್ಲೀಸಿಂಗ್‌ಮನ್</td><td>2407–10</td></tr>
<tr><td>ಇ] ಹೆಲ್ಪರ್</td><td>2282–10</td></tr>
<tr><td rowspan="4">7</td><td colspan="2">ಬಾಯ್ಲರ್ ವಿಭಾಗ</td></tr>
<tr><td>ಅ] ಸೀನಿಯರ್ ಬಾಯ್ಲರ್ ಅಟೆಂಡರ್</td><td>2806–10</td></tr>
<tr><td>ಆ] ಬಾಯ್ಲರ್ ಅಟೆಂಡೆಂಟ್</td><td>2598–20</td></tr>
<tr><td>ಇ] ಬಾಯ್ಲರ್ ಫೈರ್‌ಮನ್</td><td>2282–10</td></tr>
<tr><td rowspan="7">8</td><td colspan="2">ಬ್ಲೀಚಿಂಗ್ ವಿಭಾಗ</td></tr>
<tr><td>ಅ] ಬೀಂಡಸಾ ಆಪರೇಟರ್</td><td rowspan="2">2806–10</td></tr>
<tr><td>ಆ] ಸ್ವಾಗಿಂಗ್ ಮ್ಯಾನ್</td></tr>
<tr><td>ಇ] ಸಹಾಯಕರು</td><td rowspan="2">2598–20</td></tr>
<tr><td>ಈ] ಹೆಲ್ಪರ್</td></tr>
<tr><td>ಉ] ಬಾಯ್ಲಿಂಗ್ ವ್ಯಾಟ್ ಅಟೆಂಡರ್</td><td rowspan="2">2282–10</td></tr>
<tr><td>ಊ] ಎಲೆಕ್ಟ್ರಿಕ್ ಹಾಯಿಸ್ಟ್ ಆಪರೇಟರ್</td></tr>
<tr><td rowspan="3">9</td><td colspan="2">ಸ್ಲ್ಯಾಸರ್ ವಿಭಾಗ</td></tr>
<tr><td>ಅ] ಸ್ಲ್ಯಾಸರ್ ಆಪರೇಟರ್</td><td rowspan="2">2806–10</td></tr>
<tr><td>ಆ] ಸಹಾಯಕ ಸ್ಲ್ಯಾಸರ್ ಆಪರೇಟರ್</td></tr>
</table>

| | | |
|---|---|---|
| | ಇ] ಹೆಲ್ಪರ್ | 2598–20 |
| | ಈ] ಬ್ಲೇಡ್ ಶಾರ್ಪರ್ | |
| 10 | **ಮೆಷಿನ್ ಶಾಫ್** | |
| | ಅ] ಟರ್ನರ್ | 2598–20 |
| | ಆ] ಫಿಟ್ಟರ್ | |
| | ಇ] ವೆಲ್ಡರ್ | |
| | ಈ] ಗ್ಯಾಸ್ ಕಟ್ಟಿಂಗ್ | |
| | ಉ] ಕಾರ್ಪೆಂಟರ್ | 2407–10 |
| | ಊ] ನೀರಿನ ಪಂಪ್ ಆಪರೇಟರ್ | |
| | ಋ] ಹೆಲ್ಪರ್ | 2281–07 |
| 11 | **ಕಚೇರಿ ಸಿಬ್ಬಂದಿ ಆಡಳಿತ** | |
| | ಅ] ಫಾರೆಸ್ಟ್ ಸೂಪರ್‌ವೈಸರ್ | 3153–60 |
| | ಆ] ಜೂನಿಯರ್ ಫಾರೆಸ್ಟ್ ಸೂಪರ್‌ವೈಸರ್ | 2598–20 |
| | ಇ] ಸೀನಿಯರ್ ಕ್ಲರ್ಕ್ : ಕ್ಲಕ್ [ಪದವೀಧರ] ಟೈಂ ಕೀಪರ್ : ಕ್ಯಾಷಿಯರ್ | |
| | ಈ] ಟೈಪಿಸ್ಟ್ | |
| | ಉ] ಜೂನಿಯರ್ ಕ್ಲರ್ಕ್ [ಪದವೀಧರರಲ್ಲದವರು] | |
| | ಊ] ವಾಚ್‌ಮನ್ | |
| | ಋ] ಆಫೀಸ್ ಬಾಯ್ | 2598–20 |
| | ೠ] ಗೆಸ್ಟ್‌ಹೌಸ್ ಕುಕ್ | |
| | ಎ] ವಾಹನ ಚಾಲಕ | |
| | ಏ] ಕ್ಲೀನರ್ [ವಾಹನ] | |
| | ಐ] ಸ್ವೀಪರ್ | |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 2703 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 2703 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2005 ರಿಂದ ಡಿಸೆಂಬರ್ 2005ರ) ಸರಾಸರಿ ಆಧಾರದ ಮೇಲೆ 2006 ಎಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2 ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3 ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4 ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

5 ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.

6 ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು

7 ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.

8 ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 10 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.

(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.

(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 238

**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಕಾಇ 46 ಎಲ್ಎಂಡಬ್ಲ್ಯೂ 2006, ಬೆಂಗಳೂರು, ದಿನಾಂಕ: 02ನೇ ಮಾರ್ಚ್ 2009.**

ಕರ್ನಾಟಕ ರಾಜ್ಯಾದಂತ " ದರ್ಜಿ " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–4 [ಎ], ರಲ್ಲಿ ದಿನಾಂಕ: 3–5–2007 ರಂದು ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಪ್ರಕಾರ ಇದರಿಂದ ಭಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ / ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಸದರಿ ಪ್ರಸ್ತಾವನೆಯ ಬಗ್ಗೆ ಸ್ವೀಕರಿಸಲಾದ ಸಲಹೆ / ಆಕ್ಷೇಪಣೆಗಳನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 3ನೇ ಪ್ರಕರಣದ [1] ನೇ ಉಪ ಪ್ರಕರಣದ (ಬಿ) ಖಂಡ ಹಾಗೂ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಾಂತ " **ದರ್ಜಿ** " ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | **ಕೆಲಸದ ವರ್ಗಗಳು** | ದಿನ ಒಂದಕ್ಕೆ ನಿಗದಿಯಾದ ಕನಿಷ್ಠ ವೇತನ | | | |
|---|---|---|---|---|---|
| | | ವಲಯ–1 | ವಲಯ–2 | ವಲಯ–3 | ವಲಯ–4 |
| 1 | **2** | 3 | | 4 | 5 |
| | **ಅತಿಕುಶಲ** | | | | |
| 1 | ನಕಾಶೆ ಮಾಡುವವ | 96–20 | 95–20 | 94–10 | 89–40 |
| 2 | ಗುರುತು ಮಾಡುವವ ಹಾಗು ಕತ್ತರಿಸುವವ | | | | |
| 3 | ದರ್ಜಿ | | | | |
| 4 | ನಕಾಶೆ ಹಾಗೂ ಕತ್ತರಿಸುವವ | | | | |
| | **ಕುಶಲಿ** | | | | |
| 1 | ದರ್ಜಿ [1ನೇ ದರ್ಜೆ] | | | | |
| 2 | ಮುಖ್ಯ ಅಡಿಗೆಯವ | | | | |
| 3 | ಡ್ರೈವರ್ [ಚಾಲಕ] | | | | |

| | | | | | |
|---|---|---|---|---|---|
| 4 | ಕತ್ತರಿಸುವ ಯಂತ್ರ ಚಾಲಕ | 95–00 | 94–10 | 93–60 | 88–90 |
| 5 | ಪರೀಕ್ಷಕ | | | | |
| 6 | ದರ್ಜಿ ಮೇಸ್ತ್ರಿ | | | | |
| 7 | ಗುರುತು ಮಾಡಿ ಕತ್ತರಿಸುವವ | | | | |
| | **ಅರೆ ಕುಶಲ** | | | | |
| 1 | ದರ್ಜಿ [1ನೇ ದರ್ಜೆ] | 93–60 | 89–40 | 88–90 | 86–50 |
| 2 | ಖಾಟಾ ಮಿಷನ್ ಚಾಲಕ | | | | |
| 3 | ತಡೆ ಚಕ್ರದ ಮಿಷನ್ ಚಾಲಕ [ಓವರ್ ಲಾಕರ್] | | | | |
| 4 | ಇಸ್ತ್ರಿ ಮಾಡುವವ | | | | |
| 5 | ಅಳತೆ ಪರೀಕ್ಷಿಸುವವ | | | | |
| 6 | ಗುಂಡಿ ಖಾಜಾ ಹೊಲಿಯುವವ | | | | |
| | **ಕುಶಲಿಯಲ್ಲದವ** | | | | |
| 1 | ಸಹಾಯಕ | 88–90 | 86–50 | 85–40 | 78–60 |
| 2 | ರವಾನಿಸುವವ | | | | |
| 3 | ಮಾಲಿ | | | | |
| 4 | ವಿತರಣೆ | | | | |
| 5 | ಭೋಜನಾಲಯದ ಕೆಲಸಗಾರರು | | | | |
| 6 | ಟ್ರಿಮ್ ಮಾಡುವವ | | | | |
| 7 | ಕೂಲಿ | | | | |
| 8 | ಬಟ್ಟೆ ಹರಡುವವ | | | | |
| 9 | ದರ್ಜಿ – 3ನೇ ದರ್ಜೆ | | | | |
| 10 | ಪ್ಯಾಕ್ ಮಾಡುವವ | | | | |
| 11 | ವಾಚ್ ಅಂಡ್ ವಾರ್ಡ್ | | | | |
| 12 | ಕುಶಲರಲ್ಲದ ಇನ್ನಿತರರು | | | | |
| | **ಕಛೇರಿ ಸಿಬ್ಬಂದಿ** | | | | |
| 1 | ಲೆಕ್ಕ ಪತ್ರದ ಅಕೌಂಟೆಂಟ್ | 96–20 | 96–20 | 94–10 | 89–40 |
| 2 | ನಗದಿ ಗುಮಾಸ್ತ | | | | |
| 3 | ಶೀಘ್ರಲಿಪಿಗಾರ | | | | |
| 4 | ಬೆರಳಚ್ಚುಗಾರ – ಗುಮಾಸ್ತ | 95–20 | 94–10 | 93–60 | 88–90 |
| 5 | ಬೆರಳಚ್ಚುಗಾರ | | | | |
| 6 | ಗುಮಾಸ್ತ | | | | |
| 7 | ಸರಕು ಗುಮಾಸ್ತ | | | | |
| 8 | ಸ್ವಾಗತಕಾರ | | | | |
| 9 | ಟೆಲಿಫೋನ್ ನಿರ್ವಾಹಕ | | | | |
| 10 | ಆಫೀಸ್ ಬಾಯ್ | 88–30 | 86–50 | 85–40 | 78–60 |

**ತುಟ್ಟಿಭತ್ಯೆ:–** ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 2703 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 2703 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ಜೀವನ ನಿರ್ವಹಣಾ ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ

ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2005 ರಿಂದ ಡಿಸೆಂಬರ್ 2005)ರ ಸರಾಸರಿ ಆಧಾರದ ಮೇಲೆ 2006 ಎಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.
2 ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.
3 ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4 ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
5 ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.
6 ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು
7 ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು.
8 ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 10 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.
(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.
(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

**10. ಕುಶಲ :** ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ ಮತ್ತು ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

**11. ಅರೆ ಕುಶಲ :** ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

**12. ಕುಶಲರಲ್ಲದವರು :** ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನುಗಳ ಜ್ಞಾನವಿರುವ ಕೆಲಸವನ್ನು ಮಾಡುವವರು.

ವಲಯ–1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.
ವಲಯ–2 : ಜಿಲ್ಲಾ ಕೇಂದ್ರ ಪ್ರದೇಶಗಳು ಮತ್ತು ಅದಕ್ಕೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.
ವಲಯ–3 : ಟೌನ್ ಮುನಿಸಿಪಲ್ ಏರಿಯಾ.
ವಲಯ–4 : ವಲಯ–1, 2 ಮತ್ತು 3ರಲ್ಲಿ ನಮೂದಿಸದೇ ಇರುವ ರಾಜ್ಯದ ಉಳಿದ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 241

**ಯು.ಎನ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಕಾಇ 44 ಎಲ್‌ಎಂಡಬ್ಲ್ಯೂ 2006, ಬೆಂಗಳೂರು, ದಿನಾಂಕ: 02ನೇ ಮಾರ್ಚ್ 2009.**

ಕರ್ನಾಟಕ ರಾಜ್ಯಾದಂತ "ಪ್ರಿಂಟಿಂಗ್ ಪ್ರೆಸ್" ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–4 [ಎ], ರಲ್ಲಿ ದಿನಾಂಕ:03–05–2007 ರಂದು ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಪ್ರಕಾರ ಇದರಿಂದ ಭಾಧಿತರಾಗುವ/ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲವಾದ್ದರಿಂದ

ಕರಡು ಪ್ರಸ್ತಾವನೆಯನ್ನು ಕನಿಷ್ಟ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಟ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, ಕನಿಷ್ಟ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ 3ನೇ ಪ್ರಕರಣದ [1] ನೇ ಉಪ ಪ್ರಕರಣದ (ಬಿ) ಖಂಡ ಹಾಗೂ 5ನೇ ಪ್ರಕರಣದ (1)ನೇ ಉಪ ಪ್ರಕರಣದ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಾಂತ "ಪ್ರಿಂಟಿಂಗ್ ಪ್ರೆಸ್" ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಟ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

ಅನುಸೂಚಿ

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಟ ವೇತನ ಪ್ರತಿ ದಿನಕ್ಕೆ | | | ಕನಿಷ್ಟ ವೇತನ ಪ್ರತಿ ತಿಂಗಳಿಗೆ | | |
|---|---|---|---|---|---|---|---|
| | | ವಲಯ 1 | ವಲಯ 2 | ವಲಯ 3 | ವಲಯ 1 | ವಲಯ 2 | ವಲಯ 3 |
| 1 | 2 | 3 | 4 | 5 | 6 | 7 | 8 |
| 1 | ಕಂಪೋಸಿಟರ್ | 106–00 | 102–60 | 101–80 | 2758–40 | 2675–40 | 2648–10 |
| 2 | ಪ್ರಿಂಟರ್ | | | | | | |
| 3 | ಬೈಂಡರ್ | | | | | | |
| 4 | ಮೋನೋ ಕಾಸ್ಟರ್ | | | | | | |
| 5 | ಟೈಪ್ ಕಾಸ್ಟರ್ | | | | | | |
| 6 | ಬ್ಲಾಕ್ ಮೇಕರ್ | | | | | | |
| 7 | ಕರಡು ಓದುವವರು | | | | | | |
| 8 | ಸಿಲಿಂಡರ್ ಮ್ಯಾನ್ | | | | | | |
| 9 | ಪ್ರೋಸಸ್ ಎನ್‌ಗ್ರೇವರ್ | | | | | | |
| 10 | ಟ್ರೆಡ್ಲೆ ಪ್ರೆಸ್ ಮ್ಯಾನ್ ಪ್ಲೇಟ್ ಮ್ಯಾನ್ | | | | | | |
| 11 | ಡಾರ್ಕ್ ರೂಂ ಸಹಾಯಕ | | | | | | |
| **ಅರೆ ಕುಶಲರು** | | | | | | | |
| 1 | ರೂಲಿಂಗ್ ಫೀಡರ್ | 102–00 | 101–10 | 100–50 | 2656–00 | 2626–10 | 2580–90 |
| 2 | ಲೆಟರ್ ಪ್ರೆಸ್ ಫೀಡರ್ | | | | | | |
| 3 | ಪರೀಕ್ಷಿಸುವವರು | | | | | | |
| 4 | ಪ್ಯಾಕರ್‍ಸ್ | | | | | | |
| 5 | ಪರ್‌ಪೋರೇಟರ್ | | | | | | |
| 6 | ಕತ್ತರಿಸುವವರು: ಹೊಲಿಯುವವರು: ಮುದ್ರಿಸುವವರು | | | | | | |
| 7 | ಹೊಲಿಗೆ ಯಂತ್ರದ ಕೆಲಸದವರು | | | | | | |
| 8 | ಕುಶಲ ಕೆಲಸ ಗಾರರಿಗೆ ಸಹಾಯಕ | | | | | | |
| **ಕುಶಲರಲ್ಲದವರು** | | | | | | | |
| 1 | ಜವಾನರು ಕಾವಲುಗಾರರು ಆಫೀಸ್ ಬಾಯ್ | 98–20 | 97–10 | 94–20 | 2550–50 | 2526–50 | 2448–00 |

| | | | | | | | |
|---|---|---|---|---|---|---|---|
| 2 | ಕಸಗುಡಿಸುವವರು | | | | | | |
| 3 | ಕ್ಲೀನರ್ ಮತ್ತು ಹಲಲ್ದಾರ್ | | | | | | |
| 4 | ಮೇಲೆ ನಮೂದಿಸದೇ ಇರುವ ಇತರೆ ಕುಶಲರಲ್ಲದ ಕಾರ್ಮಿಕರು | | | | | | |
| | | | | ಕಛೇರಿ ಸಿಬ್ಬಂದಿ | | | |
| 1 | ಗುಮಾಸ್ತರು, ಬೆರಳಚ್ಚುಗಾರರು | | | | 2679–60 | 2541–00 | 2533–70 |
| 2 | ಕ್ಯಾಷಿಯರ್ | | | | 2748–40 | 2726–30 | 2703–20 |
| 3 | ಸ್ಟೋರ್ ಕೀಪರ್ | | | | 2691–70 | 2663–90 | 2651–30 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 2703 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 2703 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 3.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2005 ರಿಂದ ಡಿಸೆಂಬರ್ 2005ರ) ಸರಾಸರಿ ಆಧಾರದ ಮೇಲೆ 2006 ಎಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1 ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕಲಾಗುವುದು.

2 ಕೆಲಸದ ಸ್ವರೂಪವು ಒಂದೇ ರೀತಿಯದಾಗಿರುವ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರಿಗೆ ಪುರುಷ ಕಾರ್ಮಿಕರಿಗೆ ನೀಡುವ ವೇತನದ ದರಗಳನ್ನೇ ಸಂದಾಯ ಮಾಡತಕ್ಕದ್ದು.

3 ವೇತನ ಪಾವತಿಯಲ್ಲಿರುವ ದರವು ಹೆಚ್ಚಾಗಿದ್ದಲ್ಲಿ, ಆ ಹೆಚ್ಚಾಗಿರುವ ದರಗಳಲ್ಲಿ ವೇತನ ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4 ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ವೇತನದ ಕೂಲಿಯ ಪ್ರಮಾಣವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

5 ಅಧಿಸೂಚನೆಯಲ್ಲಿ ಸೂಚಿಸದೇ ಇರುವ ವರ್ಗದವರಿಗೆ ಅದೇ ಸ್ವರೂಪದ ಉದ್ಯೋಗದ ಕಾರ್ಮಿಕರಿಗೆ ಕೊಡುವ ವೇತನವನ್ನು ಸಂದಾಯ ಮಾಡತಕ್ಕದ್ದು.

6 ವಾರದ ಅಥವಾ ಹಬ್ಬದ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ 1948 ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡು ಪಟ್ಟು ವೇತನವನ್ನು ಕೊಡತಕ್ಕದ್ದು

7 ಸಾಮಾನ್ಯ ಕೆಲಸದ ಅವಧಿಗಿಂತ ಮೀರಿದ ಕೆಲಸಕ್ಕೆ ಸಾಮಾನ್ಯ ದರಗಳ ಎರಡು ಪಟ್ಟು ವೇತನವನ್ನು ಕೊಡುವುದು

8 ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 10 ಪೈಸೆಗೆ ಪೂರ್ಣಗೊಳಿಸುವುದು.

(ಅ) ಕಿಶೋರಾವಸ್ಥೆ ಕಾರ್ಮಿಕರಿಗೆ ಅವರ ವರ್ಗದ 80 ಪ್ರತಿಶತ ವೇತನವನ್ನು ಕೊಡತಕ್ಕದ್ದು.

(ಆ) ಅಪ್ರೆಂಟೀಸ್‌ಗಳಿಗೆ ಅವರ ವರ್ಗದ ವೇತನದ ಪ್ರತಿಶತ 75 ರಷ್ಟು ವೇತನವನ್ನು ಕೊಡತಕ್ಕದ್ದು.

(ಇ) ಕಿಶೋರಾವಸ್ಥೆ ಎಂದರೆ 15 ವರ್ಷ ಮೀರಿದ, ಆದರೆ 18 ವರ್ಷದೊಳಗಿರುವ ವ್ಯಕ್ತಿ.

**9. ಕುಶಲ :** ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ ಮತ್ತು ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

**10. ಅರೆ ಕುಶಲ :** ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

**11. ಕುಶಲರಲ್ಲದವರು :** ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಆದರೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನುಗಳ ಜ್ಞಾನವಿರುವ ಕೆಲಸವನ್ನು ಮಾಡುವವರು.

ವಲಯ–1 : ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳು ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

ವಲಯ–2 : ಜಿಲ್ಲಾ ಕೇಂದ್ರ ಪ್ರದೇಶಗಳು ಮತ್ತು ಅದಕ್ಕೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

ವಲಯ–3 : ವಲಯ–1 ಮತ್ತು 2ರಲ್ಲಿ ನಮೂದಿಸದೇ ಇರುವ ರಾಜ್ಯದ ಇತರೇ ಪ್ರದೇಶಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

ಪಿ.ಆರ್. 240

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಮಮಇ 09 ಮಅನಿ 2009, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

2008–09 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ 2009ನೇ ಮಾರ್ಚ್ 8 ರಂದು ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಮಲ್ಲೇಶ್ವರಂ ಮೈದಾನದಲ್ಲಿ ಆಚರಿಸಲು ತೀರ್ಮಾನಿಸಿದ್ದು, ಸಮಾರಂಭಕ್ಕೆ ವೇದಿಕೆ ಹಾಗೂ ಸಾರ್ವಜನಿಕರು ಕೂರುವ ಉದ್ದೇಶದಿಂದ ಶಾಮಿಯಾನ ಹಾಕುವ ಬಗ್ಗೆ ಕಾಲಾವಕಾಶ ಕಡಿಮೆ ಇರುವುದರಿಂದ ಟೆಂಡರ್ ಕರೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000 ದ ನಿಯಮ 17(2)ರಂತೆ ಟೆಂಡರ್ ಬುಲೆಟಿನ್‌ನಲ್ಲಿ ಟೆಂಡರ್ ಗಳನ್ನು ಆಹ್ವಾನಿಸುವ ನೋಟೀಸಿನ ಪ್ರಕಟಣೆ ದಿನಾಂಕ ಮತ್ತು ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕದ ನಡುವೆ ಇರಬೇಕಾದ ಕನಿಷ್ಠ 30 ದಿನಗಳ ಕಾಲಾವಕಾಶವನ್ನು ಸದರಿ ನಿಯಮಗಳ ನಿಯಮ 17(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 15 ದಿನಗಳಿಗೆ ಕಡಿತಗೊಳಿಸಿ ಆದೇಶಿಸಿದೆ.

ಮುಂದುವರೆದು, ಕೆ.ಟಿ.ಪಿ.ಪಿ. ಅಧಿನಿಯಮ 2000ದ ಪರಿಚ್ಛೇದ 9(i) ರಡಿ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರನ್ನು ಟೆಂಡರ್ ಕರೆಯುವ ಪ್ರಾಧಿಕಾರವೆಂದೂ ಹಾಗೂ ಸದರಿ ಅಧಿನಿಯಮದ ಪರಿಚ್ಛೇದ 9(ii) ರಡಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವೆಂದು ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 125

**ಎಂ.ಎಸ್. ಮಂಜುನಾಥ್**

ಸರ್ಕಾರದ ಉಪ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಹಕಾರ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಒ 18 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮೈಸೂರು ಜಿಲ್ಲೆ ಕೆ.ಆರ್. ನಗರ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಮತ್ತು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕೆ.ಆರ್. ನಗರ ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**ಕೆ.ಆರ್.ನಗರ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.,**

ಶ್ರೀ ಚೇತನ್ ಬಿನ್ ರುದ್ರಮುನಿ, 7ನೇ ಮುಖ್ಯ ರಸ್ತೆ, 15ನೇ ಅಡ್ಡರಸ್ತೆ, ಕೆ.ಆರ್. ನಗರ ತಾಲ್ಲೂಕು

**ಕೆ.ಆರ್. ನಗರ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.,**

1. ಶ್ರೀ ಎಲ್.ಎಸ್. ಮಹೇಶ್ ಬಿನ್ ಶಿವಣ್ಣ, ಲಾಲನಹಳ್ಳಿ, ಕಸಬಾ ಹೋಬಳಿ, ಕೆ.ಆರ್.ನಗರ ತಾ:

2. ಶ್ರೀಮತಿ ಶೈಲಜ ಕೋಂ ರಾಜೇಶ್, ಹಂಪಾಪುರ, ಹೊಸಗ್ರಹಾರ ಹೋಬಳಿ, ಕೆ.ಆರ್.ನಗರ ತಾ:
3. ಶ್ರೀ ಈರಣ್ಣ ಬಿನ್ ತಿಮ್ಮನಾಯಕದೇವಿ ತಂದೆ ಮಿರ್ತಿ ಹೋಬಳಿ, ಕೆ.ಆರ್. ನಗರ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 126

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 19 ಸಿಎಸ್ಎಸ್ 2009, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮತ್ತು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹುಣಸೂರು ಇವುಗಳ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**ಹುಣಸೂರು ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.**

ಶ್ರೀ ವೆಂಕಟೇಗೌಡ (ಉ. ರಾಮು) ಬಿನ್ ತಿಮ್ಮೇಗೌಡ, ಕರಿಮುದ್ದನಹಳ್ಳಿ ಹುಣಸೂರು ತಾಲ್ಲೂಕು

**ಹುಣಸೂರು ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.,**

1. ಶ್ರೀ ಸುರೇಶ್ ಬಿನ್ ಬೆಟ್ಟಪ್ಪ ಶೆಟ್ಟಿ, ಹನಗೂಡು ಗ್ರಾಮ & ಅಂಚೆ, ಹುಣಸೂರು ತಾಲ್ಲೂಕು
2. ಶ್ರೀಮತಿ ದಾಕ್ಷಾಯಣಿ ಕೋಂ ಕೃಷ್ಣೇಗೌಡ, ಬೋರೇಗೌಡನಕೊಪ್ಪಲು (ಹತ್ತಿಕುಪ್ಪೆ), ಗಾವಡಗೆರೆ ಹೋಬಳಿ,
3. ಶ್ರೀ ಬಿ.ಸಿ. ನಾಗರಾಜು ಬಿನ್ ಚಿಕ್ಕತಮ್ಮಯ್ಯ, ಬೋಳನಹಳ್ಳಿ ಗ್ರಾಮ ಮತ್ತು ಅಂಚೆ, ಹುಣಸೂರು ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 127

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 20 ಸಿಎಸ್ಎಸ್ 2009, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.,, ಹೊಳಲ್ಕೆರೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಗುರುಮೂರ್ತಿ ಬಿನ್ ತಿಂಮ್ಲಾಪ್ಪ, ಚೀರೇನಹಳ್ಳಿ
2. ಶ್ರೀಮತಿ ಪ್ರೇಮ ಕೋಂ ಟಿ. ಚಂದ್ರಪ್ಪ, ಉಪ್ಪರಿಗೇನಹಳ್ಳಿ
3. ಶ್ರೀ ವೀರೇಶ್ ಬಿನ್ ತಿಮ್ಮಪ್ಪ, ಕಾಳಘಟ್ಟ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 128

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ